ಜಿ. ವಿ. ಬಿ. ನಾಯ್ಡು

# ತೆಂಗು



ಪ್ರಚಾರ ಪುಸ್ತಕಮಾಲೆ ೧೪೭
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೩

ಪ್ರಚಾರಪುಸ್ತಕ ಮಾಲೆ—೧೪೭

# ತೆಂಗು

ಜಿ. ವಿ. ಬಿ. ನಾಯ್ಡು



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೩

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾ ನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆ ಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾ ರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭ ಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡು ತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ

ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೆ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರ ನಲವತ್ತಾರು ಪುಸ್ತಕಗಳು

ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಜಿ. ವಿ. ಬಿ. ನಾಯ್ಡು ಅವರ ' ತೆಂಗು ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಕೆ. ಎಲ್. ಶ್ರೀಮಾಲಿ
ಕುಲಪತಿ

# ತೆಂಗು

"ಕಲಿಯುಗದ ಕಲ್ಪವೃಕ್ಷ"ವೆಂದು ಹೆಸರಾಂತ ತೆಂಗು, ಉಷ್ಣ ವಲಯದ ಶ್ರೇಷ್ಠ ಬೆಳೆ. ಸುಮಾರು ೪೦-೫೦ ಅಡಿಗಳವರೆಗೂ ಬೆಳೆದ ಉದ್ದನೆಯ ಕಾಂಡ, ತುದಿಯಲ್ಲಿ ಸುತ್ತಲೂ ದಟ್ಟವಾಗಿ ಜೋಡಿಸಿದಂತಿರುವ ಎಲೆಗಳ ಸಮೂಹ, ಎಲೆಗಳ ಎಡೆಗಳಲ್ಲಿ ಸುಂದರವಾಗಿ ಕಾಣುವ ಕಾಯಿಗಳ ಗುಚ್ಛ—ಹೀಗೆ ನೋಡಲು ಅತಿ ರಮ್ಯವಾದ ಬಹು ಉಪಯುಕ್ತ ಮರ ಪ್ರಪಂಚದಲ್ಲಿ ಬೇರೊಂದಿರಲಾರದು. ಉಷ್ಣವಲಯದ ಜನರ ಆರ್ಥಿಕ ಭದ್ರತೆ ಈ ಬೆಳೆಯನ್ನೇ ಅವಲಂಬಿಸಿದ್ದು, ಅದು ಅವರ ಗೌರವಾದರಗಳಿಗೆ ಆಧಾರವಾಗಿದೆ. ಆದ್ದರಿಂದಲೇ ಪ್ರಪಂಚದ ಅನೇಕ ಕಡೆ ಅದಕ್ಕೆ ಅನೇಕ ಗೌರವಯುತ ಹೆಸರುಗಳನ್ನಿಟ್ಟಿದ್ದಾರೆ. 'ಕಲ್ಪವೃಕ್ಷ', 'ಜೀವವೃಕ್ಷ', 'ಮಾನವ ಜೀವನೋದ್ಧಾರ', 'ಸಂಪತ್ತು ಸಮೃದ್ಧಿವೃಕ್ಷ', ಮುಂತಾದ ಹೆಸರುಗಳು ಅದಕ್ಕೆ ಸಲ್ಲತಕ್ಕುವೇ ಆಗಿವೆ.

ತೆಂಗಿನ ಮರದ ಪ್ರತಿಯೊಂದು ಭಾಗವೂ ಉಪಯುಕ್ತವಾದದ್ದು; ಎಳನೀರು ರುಚಿಕರ ಪಾನೀಯ; ತಿರುಳು ಒಳ್ಳೆಯ ಆಹಾರ ವಸ್ತು. ಕೊಬ್ಬರಿಯಿಂದ ತೆಗೆದ ಎಣ್ಣೆ ಅಡಿಗೆಗೂ, ಸಾಬೂನು ಮುಂತಾದವುಗಳ ತಯಾರಿಕೆಗೂ ಉಪಯುಕ್ತವಾದದ್ದು; ತೆಂಗಿನ ಹಿಂಡಿ ದನಗಳ ಉತ್ತಮ ಮೇವು; ಕಾಯಿಯ ನಾರು ಹಗ್ಗ ಚಾಪೆ ಮುಂತಾದುವುಗಳ ಉತ್ಪನ್ನಕ್ಕೆ ಸಹಾಯಕ; ಮರದ ಕಾಂಡ ಮನೆ ಕಟ್ಟಲೂ, ಕುರ್ಚಿ ಮೇಜು ಮುಂತಾದ ಪೀಠೋಪಕರಣಗಳನ್ನು ರಚಿಸಲೂ ಉಪಯುಕ್ತ; ಗರಿಗಳನ್ನು ಹೆಣೆದು ಮಾಡಿಗೆ ಹೊದಿಸಲು ಅನುಕೂಲ; ಕಡ್ಡಿಗಳು ಉತ್ತಮ ಪೊರಕೆ; ಮತ್ತು ಅವುಗಳ

ಹೊಂಬಾಳೆಯಿಂದ ತೆಗೆಯಬಹುದಾದ ರಸದಿಂದ ಬೆಲ್ಲ, ಹೆಂಡಗಳ
ಉತ್ಪನ್ನವಾಗುತ್ತವೆ.

ತೆಂಗಿನ ಮರದ ಪಾನೀಯ ಆಹಾರ ಮತ್ತು ಆಶ್ರಯವನ್ನು
ಒದಗಿಸುವುದೇ ಅಲ್ಲದೆ ಅನೇಕ ಕೈಗಾರಿಕೆಗಳಿಗೆ ಬೇಕಾದ ಕಚ್ಚಾ
ವಸ್ತುಗಳನ್ನೂ ಉತ್ಪನ್ನ ಮಾಡುತ್ತದೆ. ಆದ್ದರಿಂದ ತೆಂಗು ಬೆಳೆ
ಯುವ ಪ್ರದೇಶಗಳಲ್ಲಿನ ಜನರ ಜೀವನ ಇದನ್ನು ಪೂರ್ಣವಾಗಿ
ಅವಲಂಬಿಸಿದೆ. ತೆಂಗು ಬಡಜನರ ಆಧಾರ. ವಿಶಾಲ ತೋಟಗಳು
ಈಗ ಪ್ರಾರಂಭವಾಗುತ್ತಿದೆಯೇ ಹೊರತು, ಸಾಮಾನ್ಯವಾಗಿ
ಒಂದು ಎಕರೆಗೆ ಒಳಪಟ್ಟಿರುವ ತೋಟಗಳೇ ಹೆಚ್ಚು. ೮–೧೦ ಮರ
ಗಳಿದ್ದಲ್ಲಿ ಒಂದು ಸಣ್ಣ ಸಂಸಾರದ ಜೀವನ ಸಾಗುತ್ತದೆ. ಭಾರತ
ದಲ್ಲಿ ಶೇ. ೯೦ ಭಾಗ ೧ ಎಕರೆಗೆ ಒಳಪಟ್ಟೂ, ಫಿಲಿಪ್ಪೈನ್ಸ್‌ನಲ್ಲಿ
ಶೇ. ೮೨ ಭಾಗ ೫ ಎಕರೆಗೆ ಮೀರದೆಯೂ, ಸಿಂಹಳದಲ್ಲಿ ಶೇ. ೮೦
ಭಾಗ ೨೦ ಎಕರೆಗೆ ಮೀರದೆಯೂ ಇವೆ. ಮಲಯಾದಲ್ಲಿ ಮಾತ್ರ
ಶೇ. ೬೦ ಭಾಗ ೧೦೦ ಎಕರೆಯವರೆವಿಗೂ ಇರಬಹುದಾಗಿದೆ.

ಉಷ್ಣವಲಯದ ಬಹುಭಾಗ ಜನಜೀವನದಲ್ಲಿ ತೆಂಗು ಮುಖ್ಯ
ಪಾತ್ರವಹಿಸಿದೆ. ಫಿಲಿಪ್ಪೈನ್ಸ್ ದ್ವೀಪಗಳ ಜನಾಂಗದ ೧/೩ ಭಾಗ
ಇದರ ಕೈಗಾರಿಕೆಯಿಂದಲೇ ಜೀವಿಸುತ್ತಾರೆ. ಭಾರತದಲ್ಲಿ ಸುಮಾರು
೪೦ ಲಕ್ಷ ಜನರಿಗೂ, ಸಿಂಹಳದಲ್ಲಿ ೩೦ ಲಕ್ಷ ಜನರಿಗೂ ತೆಂಗಿನ
ಕೈಗಾರಿಕೆಯೇ ಮೂಲಾಧಾರವೆಂದು ಪರಿಗಣಿಸಲಾಗಿದೆ. ಕೇರಳ
ದಲ್ಲಿ ಶೇ. ೩೫ ಭಾಗ ಇದನ್ನೇ ನಂಬಿದ್ದಾರೆ.

ತೆಂಗಿನಕಾಯಿ ಮತ್ತು ಅದರ ಉತ್ಪನ್ನ ವಸ್ತುಗಳು ಬಹು
ಮುಖ್ಯ ಆಹಾರ. ಭಾರತದಲ್ಲಿ ಅದರ ಬಳಿಕೆ ಹೆಚ್ಚು. ಎಳನೀರು,
ಕಾಯಿ, ಕೊಬ್ಬರಿ ಎಣ್ಣೆ, ಒಣತುರಿ—ಹೀಗೆ ಅನೇಕ ವಿಧದಲ್ಲಿ
ಅದನ್ನು ಉಪಯೋಗಿಸಲಾಗುತ್ತಿದೆ. ನಮ್ಮ ದೇಶದ ಒಟ್ಟು

ಉತ್ಪತ್ತಿಯ ಶೇ. ೮೪ ಭಾಗ ದೇಶದಲ್ಲೇ ಬಳಸಲಾಗುತ್ತಿದೆ. ಸಿಂಹಳದಲ್ಲಿ ಉತ್ಪನ್ನದ ಶೇ. ೫೦ ಭಾಗವೂ, ಫಿಲಿಪೈನ್ಸ್‌ನಲ್ಲಿ ಶೇ. ೪೫ ಭಾಗವೂ ಮಾತ್ರ ಉಪಯೋಗಿಸಲ್ಪಡುತ್ತದೆ. ತೆಂಗಿನಿಂದ ದೇಹಕ್ಕೆ ಬೇಕಾದ ಕೆಲವು ಅನ್ನಾಂಗಗಳು, ಕೊಬ್ಬು ಮತ್ತು ಸಸಾರ ಜನಕಗಳೂ ಒದಗುತ್ತವೆ.

ದೇಶದ ಆರ್ಥಿಕ ಸುಭದ್ರತೆಗೆ ಆವಶ್ಯಕವಾದ ವಿದೇಶೀ ವಿನಿಮಯ ಹೊಂದಲು ಇದು ಒಂದು ಮುಖ್ಯ ಬೆಳೆ. ಫಿಲಿಪೈನ್ಸ್ ದೇಶದ ಶೇ. ೪೦–೫೦ ಭಾಗ ರಫ್ತು, ತೆಂಗಿನ ಮರಕ್ಕೆ ಸಂಬಂಧಪಟ್ಟ ವಸ್ತುಗಳೇ ಆಗಿವೆ. ಭಾರತ, ಸಿಂಹಳ ಮತ್ತು ಮಲಯಾ ದೇಶ ಗಳಲ್ಲೂ ಇದು ರಫ್ತಿನ ಒಂದು ಮುಖ್ಯಾಂಶ. ಶಾಂತಿಸಾಗರದ ದ್ವೀಪಗಳಲ್ಲಿ ಇದೇ ಮುಖ್ಯ. ಆದ್ದರಿಂದಲೇ ಪೀರಿಸ್ "ಈ ದ್ವೀಪ ಗಳಲ್ಲಿ ತೆಂಗು ಇಲ್ಲದಿದ್ದಲ್ಲಿ ಜನರು ಬಾಳಲು ಸಾಧ್ಯವೇ ಇಲ್ಲ. ಇದನ್ನು ಮೀರಿಸಬಲ್ಲ ಬೇರೆ ಯಾವ ವಸ್ತುವೂ ಇದುವರೆಗೆ ಕಂಡು ಬಂದಿಲ್ಲ,—ಮುಂದೆಯೂ ಕಂಡುಬರುವ ಸೂಚನೆ ಇಲ್ಲ"— ಎಂದಿದ್ದಾನೆ.

## ವಿಸ್ತೀರ್ಣ

ತೆಂಗನ್ನು ತೋಟದಲ್ಲೇ ಅಲ್ಲದೆ ಮನೆಮನೆಗೂ ಸ್ಥಳಾವಕಾಶ ವಿದ್ದಂತೆ ಬೆಳೆಯುತ್ತಿರುವುದರಿಂದ ನಿಗದಿಯಾದ ವಿಸ್ತೀರ್ಣ ಕಂಡು ಹಿಡಿಯಲು ಸಾಧ್ಯವಿಲ್ಲ. ಇದುವರೆವಿಗೂ ತೆಂಗಿನ ವಿಸ್ತೀರ್ಣ ಮತ್ತು ಉತ್ಪತ್ತಿಯನ್ನು ನಿರ್ಧರಿಸುವ ಮಾರ್ಗ ಪರಿಪೂರ್ಣವಾ ಗಿಲ್ಲ. ಅಂದಾಜಾಗಿ ನಿಷ್ಕರ್ಷಿತ ವಿಸ್ತೀರ್ಣ ಈ ರೀತಿ ಇದೆ:

| ದೇಶ | ವಿಸ್ತೀರ್ಣ (ಸಾವಿರ ಎಕರೆಗಳಲ್ಲಿ) |
|---|---|
| ೧. ಫಿಲಿಪೈನ್ಸ್ | ೨೫೭೧ |
| ೨. ಮಲಯಾ ಮತ್ತು ಸುತ್ತಮುತ್ತಲಿನ ದ್ವೀಪಗಳು | ೩೩೪೭ |
| ೩. ಸಯಾಂ, ಇಂಡೊನೇಷ್ಯ ಮೊದಲಾದ ಏಷ್ಯಾ ರಾಜ್ಯಗಳು | ೮೨೧ |
| ೪. ಭಾರತ | ೧೫೯೦ |
| ೫. ಸಿಂಹಳ | ೧೦೭೦ |
| ೬. ಶಾಂತಿಸಾಗರದ ದ್ವೀಪಗಳು | ೬೦೧ |
| ೭. ಪೂರ್ವ ಆಫ್ರಿಕಾ | ೩೬೮ |
| ೮. ಪಶ್ಚಿಮ ಆಫ್ರಿಕಾ | ೭೦ |
| ೯. ವೆಸ್ಟ್ ಇಂಡೀಸ್ ದ್ವೀಪಗಳು | ೧೧೨ |
| ೧೦. ಮಧ್ಯ ಮತ್ತು ದಕ್ಷಿಣ ಅಮೆರಿಕಾ | ೧೩೬ |

ಭಾರತದಲ್ಲಿ ಎಕರೆಯೊಂದರ ಉತ್ಪನ್ನ ಇತರ ದೇಶಗಳಿಗಿಂತ ಹೆಚ್ಚಾಗಿದೆ. ಮುಖ್ಯ ದೇಶಗಳ ತೆಂಗಿನ ವಿಸ್ತೀರ್ಣ ಮತ್ತು ಉತ್ಪನ್ನಗಳನ್ನು ಕೆಳಗೆ ಸೂಚಿಸಿದೆ.

| ದೇಶ | ವಿಸ್ತೀರ್ಣ (ದಶಲಕ್ಷ ಎಕರೆಗಳಲ್ಲಿ) | ಉತ್ಪತ್ತಿ (ದಶಲಕ್ಷ ಕಾಯಿಗಳಲ್ಲಿ) |
|---|---|---|
| ೧. ಫಿಲಿಪೈನ್ಸ್ | ೨.೫ | ೪೯೧೬ |
| ೨. ಭಾರತ | ೧.೫೯ | ೪೧೫೧ |

| ದೇಶ | ವಿಸ್ತೀರ್ಣ (ದಶಲಕ್ಷ ಎಕರೆಗಳಲ್ಲಿ) | ಉತ್ಪತ್ತಿ (ದಶಲಕ್ಷ ಕಾಯಿಗಳಲ್ಲಿ) |
|---|---|---|
| ೩. ಇಂಡೋನೇಷಿಯಾ | ೧.೫೦ | ೩,೨೦೦ |
| ೪. ಸಿಂಹಳ | ೧.೦೭ | ೨೧೪೭ |
| ೫. ಮಲಯಾ | ೧.೬೦ | ೮೫೦ |
| ೬. ದಕ್ಷಿಣ ಸಮುದ್ರ ದ್ವೀಪಗಳು | ೦.೬೦ | ೭೫೦ |

ಭಾರತದಲ್ಲಿ ಕೇರಳ ಪ್ರಾಂತ್ಯದಲ್ಲೇ ತೆಂಗಿನ ಬೆಳೆ ಹೆಚ್ಚು. ಸುಮಾರು ೧೧ ಲಕ್ಷ ಎಕರೆ ತೆಂಗು ಅಲ್ಲಿದೆ. ಮೈಸೂರು ಎರಡನೇ ಸ್ಥಾನವನ್ನೂ, ಮದರಾಸು ಮೂರನೇ ಸ್ಥಾನವನ್ನೂ, ಹೊಂದಿವೆ. ಭಾರತದ ವಿವಿಧ ಪ್ರಾಂತ್ಯಗಳಲ್ಲಿನ ತೆಂಗಿನ ಬೆಳೆಯ ವಿಸ್ತೀರ್ಣ ಮತ್ತು ಉತ್ಪತ್ತಿ ಕೆಳಗಿನ ಪಟ್ಟಿಯಲ್ಲಿ ಸೂಚಿಸಲಾಗಿದೆ.

| ಪ್ರಾಂತ | ವಿಸ್ತೀರ್ಣ (ಎಕರೆಗಳಲ್ಲಿ) | ಉತ್ಪತ್ತಿ (ಸಾವಿರ ಕಾಯಿಗಳಲ್ಲಿ) |
|---|---|---|
| ೧. ಕೇರಳ | ೧೦,೯೮,೫೦೧ | ೨೭,೪೧,೧೪೧ |
| ೨. ಮೈಸೂರು | ೨,೧೪,೭೫೨ | ೫,೬೮,೪೭೮ |
| ೩. ಮದರಾಸು | ೧,೨೯,೩೧೯ | ೪,೧೮,೨೧೪ |
| ೪. ಆಂಧ್ರ | ೮೩,೭೦೮ | ೩,೧೧,೨೪೧ |
| ೫. ಬೊಂಬಾಯಿ | ೨೦,೩೩೧ | ೩೦,೦೨೧ |
| ೬. ಪಶ್ಚಿಮ ಬಂಗಾಲ | ೧೬,೫೦೦ | ೨೨,೨೦೫ |

| ಪ್ರಾಂತ | ವಿಸ್ತೀರ್ಣ (ಎಕರೆಗಳಲ್ಲಿ) | ಉತ್ಪತ್ತಿ (ಸಾವಿ ಕಾಯಿಗಳಲ್ಲಿ) |
|---|---|---|
| ೭. ಒರಿಸ್ಸಾ | ೧೦,೪೬೮ | ೨೯,೩೭ |
| ೮. ಲಕ್ಷ ದ್ವೀಪಗಳು | ೭,೨೬೯ | ೧೫,೪೭೪ |
| ೯. ಅಸ್ಸಾಂ | ೨,೦೦೦ | ೧೨;೭೮೭ |
| ೧೦. ಅಂಡಮಾನ್, ನಿಕೋಬಾರ್ | ೪,೨೯೩ | ೨,೫೦೦ |

## ತೆಂಗಿನ ಉತ್ಪತ್ತಿ ಮತ್ತು ವಿಸ್ತರಣೆ

ತೆಂಗು ಉಷ್ಣವಲಯದ ಯಾವ ದೇಶದಲ್ಲಿ ಮೊದಲು ಹುಟ್ಟಿತೆಂದು ಖಚಿತವಾಗಿ ನಿರ್ಧರಿಸಲು ಆಧಾರವಿಲ್ಲ. ಪ್ರತಿ ದೇಶದಲ್ಲೂ ಅದರ ಉದ್ಭವದ ಬಗ್ಗೆ ಕೆಲವು ಕಥೆಗಳಿವೆ. ಅದು ಅಮೆರಿಕಾದ ಆಂಡೀಸ್ ಪರ್ವತ ತಪ್ಪಲಿನಲ್ಲಿ ಹುಟ್ಟಿ ಮುಂದೆ ಶಾಂತಿಸಾಗರದ ಮೂಲಕ ಹಬ್ಬಿರಬಹುದೆಂದೂ; ಮಧ್ಯ ಅಮೆರಿಕಾದ ಪನಾಮಾದಲ್ಲಿ ಅದು ಮೊದಲು ಹುಟ್ಟಿರಬಹುದೆಂದೂ; ಹಾಗೂ ಶಾಂತಿ ಸಾಗರದ ದ್ವೀಪಸ್ತೋಮಗಳಲ್ಲಿ ಹುಟ್ಟಿ ಹರಡಿರಬಹುದೆಂದೂ ಊಹೆಗಳಿವೆ. ಈ ಕೊನೆಯ ಊಹೆಗೇ ಈಗ ಹೆಚ್ಚಿನ ಬೆಂಬಲ ದೊರೆತಿದೆ

ತೆಂಗಿನ ಬೆಳವಣಿಗೆಗೆ ವಾತಾವರಣದ ಕೆಲವು ಅನುಕೂಲ ಬೇಕಾಗಿದೆ. ಹೆಚ್ಚಿನ ಬೆಳಕು ಮತ್ತು ಉಷ್ಣ; ಅಧಿಕ ಗಾಳಿ, ಮಳೆ; ಗಾಳಿಯಲ್ಲಿ ಸಾಕಷ್ಟು ತೇವಾಂಶ ಇವು ಆವಶ್ಯಕವಿದ್ದು, ಅವೆಲ್ಲಾ ಉಷ್ಣವಲಯದ ತೀರ ಪ್ರದೇಶಗಳಲ್ಲಿ ಸ್ವಾಭಾವಿಕವಾಗಿ ಒದಗು

ತ್ತದೆ. ಅಂಥ ಸ್ಥಳಗಳಲ್ಲಿಯೇ ತೆಂಗು ಸೊಂಪಾಗಿ ಬೆಳೆಯುವುದರಿಂದ ಅದು ಉಷ್ಣವಲಯದ ಮರವೆಂಬುದು ನಿಸ್ಸಂದೇಹ.

ಕಾಯಿಯ ಮೇಲಿನ ನಾರು ಕಾಯನ್ನು ತೇಲಿಸಿ ಹರಡಲು ಅನುಕೂಲವಾಗಿರುವುದರಿಂದಲೂ, ಸಮುದ್ರ ತೀರದ ಮರಳು ಭೂಮಿಯಲ್ಲಿ ಉಪ್ಪುನೀರನ್ನು ಉಪಯೋಗಿಸಿಕೊಂಡು ಚೆನ್ನಾಗಿ ಬೆಳೆದು ಫಲಕೊಡಬಹುದಾದ್ದರಿಂದಲೂ, ಅದು ಉಷ್ಣವಲಯದ ತೀರ ಪ್ರದೇಶದ ವೃಕ್ಷವೆಂದೂ ಊಹಿಸಬಹುದಾಗಿದೆ. ಮೇಲ್ಮಟ್ಟ ಹೆಚ್ಚಾದಲ್ಲೂ, ಸಮಶೀತೋಷ್ಣ ವಾತಾವರಣದೆಡೆ ಬೆಳೆದಲ್ಲೂ ಬೆಳೆವಣಿಗೆ ಕುಂಠಿತವಾಗಿ ಫಲ ಕಡಮೆಯಾಗುವುದರಿಂದ ಈ ಊಹೆಗೆ ಸಮರ್ಥನೆ ಸಿಗುತ್ತದೆ.

ತೆಂಗಿನ ಮರದ ಸಂಬಂಧೀ ವೃಕ್ಷಗಳು ಅಮೆರಿಕಾ ಖಂಡದಲ್ಲಿಯೂ ಕಂಡುಬರುತ್ತವೆ. ಅಲ್ಲದೆ ೧೫೧೫ರಲ್ಲಿ ಕೊಲಂಬಸ್ಸನು ಮೊದಲು ಅಮೆರಿಕಾಕ್ಕೆ ಬಂದಾಗ ಪನಾಮಾ ಪ್ರದೇಶದಲ್ಲಿ ತೆಂಗು ಸೊಂಪಾಗಿ ಬೆಳೆದಿದ್ದನ್ನು ಓವಿಡೋ ಎಂಬಾತ ವಿವರಿಸಿದ್ದಾನೆ. ಇದರಿಂದಾಗಿ ತೆಂಗು ಅಮೆರಿಕಾ ಖಂಡದ ಬೆಳೆಯೆಂದೂ, ಅಲ್ಲಿಂದ ಅದು ಮೂಲನಿವಾಸಿಗಳಿಂದಲೋ, ಅಥವಾ ಶಾಂತಿಸಾಗರದಲ್ಲಿ ತೇಲಿಯೋ ಇತರ ಸ್ಥಳಗಳಿಗೆ ಹಬ್ಬಿರಬೇಕೆಂದು ಬಹು ಜನರ ವಾದವಾಗಿತ್ತು.

ಆದರೆ ಇತ್ತೀಚೆಗೆ ದಕ್ಷಿಣ ಆಫ್ರಿಕಾ ಮತ್ತು ಮೆಡಗಾಸ್ಕರಿನಲ್ಲಿಯೂ ತೆಂಗಿಗೆ ಸಂಭಂದಿಸಿದ ಅನೇಕ ವೃಕ್ಷಗಳು ಪುಷ್ಕಳವಾಗಿ ಬೆಳೆಯುತ್ತಿರುವುದು ಕಂಡುಬಂದಿದೆ. ವಾಸ್ಕೋಡಿಗಾಮ ಆಫ್ರಿಕಾ ತೀರವನ್ನು ೧೪೯೮ರಲ್ಲಿ ತಲುಪಿದಾಗಲೇ ಅಲ್ಲಿ ತೆಂಗು ಚೆನ್ನಾಗಿ ಬೆಳೆಯುತ್ತಿತ್ತೆಂದು ತಿಳಿದುಬಂದಿದೆ. ಸಿಂಹಳದಲ್ಲೂ ಕ್ರಿ.ಪೂ. ೩೦೦ ರರ ವೇಳೆಗೇ ತೆಂಗು ಹೆಚ್ಚಾಗಿ ಬೆಳೆಯುತ್ತಿತ್ತೆಂದು ವರ್ಣನೆಯಿದೆ.

ಭಾರತದಲ್ಲೂ ವೇದಗಳ ನಂತರ ಕಾಲದಿಂದಲೂ ತೆಂಗಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದು ಅದು ಮುಖ್ಯ ಬೆಳೆಯಾಗಿದೆ. ಪೂರ್ವದಲ್ಲಿ ಸಮುದ್ರದಿಂದಾವೃತ್ತ ಪ್ರದೇಶವಾದ ರಾಜಾಸ್ತಾನದ ಮರುಭೂಮಿಯಲ್ಲಿ ಸುಮಾರು ೨-೪ ಕೋಟಿ ವರ್ಷಗಳ ಹಿಂದಿದ್ದ ತೆಂಗು ಜಾತಿಯ ಅವಶೇಷಗಳು ಸಿಕ್ಕಿವೆ! ಇವೆಲ್ಲದರಿಂದ ತೆಂಗು ಅಮೆರಿಕಾ ಖಂಡದಲ್ಲಿ ಸುಮಾರು ೧೦೦೦-೧೫೦೦ ವರ್ಷಗಳಿಂದೀಚೆಗೆ ಮಾತ್ರ ಬೆಳೆಯುತ್ತಿರಬಹುದಾಗಿದೆ.

ಮಧ್ಯ ಅಮೆರಿಕಾ ಖಂಡದ ಪಶ್ಚಿಮ ತೀರಗಳಲ್ಲಿ ತೆಂಗು ಚೆನ್ನಾಗಿ ಬೆಳೆಯಲಾರದು. ಅಲ್ಲದೆ ಸ್ವಾಭಾವಿಕವಾಗಿ ತೆಂಗಿನ ಉತ್ಪತ್ತಿ ಅಲ್ಲಿಯೇ ಆಗಿದ್ದಲ್ಲಿ ಸುತ್ತಮುತ್ತಲಿನ ಒಳಪ್ರದೇಶಗಳಲ್ಲೂ ಪೂರ್ವ ತೀರಗಳಲ್ಲೂ ಅದು ಹಬ್ಬಿರುತ್ತಿತ್ತು. ಅದರ ಬೆಳೆ ಹರಡದಿರುವುದೂ, ಅದರ ವಿಚಾರವಾಗಿ ಸ್ಥಳೀಯ ಕಥೆಗಳಿಲ್ಲದಿರುವುದೂ, ಇದು ಹೊಸತಾದ ಬೆಳೆಯೆಂದು ತೋರಿಕೊಡುತ್ತದೆ.

ಪಾಲಿನೀಶಿಯಾ, ಮತ್ತಿತರ ಶಾಂತಿಸಾಗರದ ದ್ವೀಪಗಳಲ್ಲಿ ತೆಂಗು ಹೆಚ್ಚಿನ ಪ್ರಾಶಸ್ತ್ಯ ಹೊಂದಿದೆ. ಮರವನ್ನು ಅಲ್ಲಿ ಪೂಜಿಸುತ್ತಾರೆ. ಅಲ್ಲದೆ ಹೂವಿನಿಂದ ಬಲಿತ ಕಾಯಿಯವರೆಗೆ ಅದಕ್ಕೆ ಪ್ರತಿ ಹಂತದಲ್ಲೂ ಬೇರೆ ಹೆಸರಿಟ್ಟಿದ್ದಾರೆ. ದ್ವೀಪದಲ್ಲಿರುವ ಮರಗಳನ್ನು ೪೦ ವಿವಿಧ ಪಂಗಡಗಳಾಗಿ ವಿಂಗಡಿಸಿ ಅವಕ್ಕೂ ಬೇರೆ ಬೇರೆ ಹೆಸರಿಟ್ಟಿದ್ದಾರೆ. ಆದ್ದರಿಂದ ಇಲ್ಲಿ ಅಮೆರಿಕಾ ಖಂಡಕ್ಕಿಂತ ಮುಂಚಿತವಾಗಿಯೇ ತೆಂಗಿನ ಬೆಳೆ ಪ್ರಾರಂಭವಾಗಿರಬೇಕು. ಆದರೆ ಈ ದ್ವೀಪಗಳು ಭೂಲಕ್ಷಣದ ಆಧಾರದಿಂದ ಹೊಸತಾಗಿ ಉದ್ಭವಿಸಿದವೆಂದು ನಿರ್ಧರಿಸಲ್ಪಟ್ಟಿರುವುದರಿಂದ ತೆಂಗು ಇಲ್ಲಿ ಉತ್ಪತ್ತಿಯಾಗಿರಲು ಸಾಧ್ಯವಿಲ್ಲ.

ಕ್ರಿ. ಪೂ. ೩೦೦ರ ವೇಳೆಗೇ ಸಿಂಹಳದಲ್ಲಿ ಹೆಚ್ಚಿನ ತೋಟಗಳಿದ್ದ ವೆಂದು ತಿಳಿದುಬರುತ್ತದೆ. ಅಲ್ಲಿ ಅನೇಕ ಜಾತಿಗಳು ವಿವಿಧ ಹೆಸರಿನಿಂದ ಕರೆಯಲ್ಪಡುತ್ತವಾದರೂ, ಅವೆಲ್ಲವೂ ಭಾರತದ ಹೆಸರುಗಳ ಅನುಸರಣೆಯಾಗಿವೆ. 'ಪೋಲ್', 'ನಿರಾಲಿ' ಎಂಬ ಸಿಂಹಳದ ಹೆಸರುಗಳು, ಸಂಸ್ಕೃತದ 'ಫಲ' 'ನಾರಿಕೇಳ' ಶಬ್ದಗಳ ರೂಪಕಗಳಾಗಿವೆ. ಬಲಿತ ಕಾಯಿಗೆ 'ಕೊಟ್ಟ ಪೋಲ್' ಎಂಬುದೂ, ಎಳನೀರಿಗೆ 'ಕುರುಂಬಾ' ಎಂಬ ಹೆಸರೂ, ತಮಿಳಿನ "ಕೊಟ್ಟ ತೇಂಗೈ", 'ಕುರುವೈ' ಪದಗಳ ಸಿಂಹಳ ಪರಿವರ್ತನೆಗಳೇ. ಸಿಂಹಳದ ಕೆಲವು ದಂತ ಕಥೆಗಳೂ ಅದು ಬಹುಶಃ ಭಾರತದಿಂದ ಅಲ್ಲಿಗೆ ಹರಡಿರಬಹುದೆಂದು ಸೂಚಿಸುತ್ತವೆ. ಕುಷ್ಠರೋಗ ಪೀಡಿತ ನಾದ ಸಿಂಹಳದ ದೊರೆಯೊಬ್ಬ ಚಿಕಿತ್ಸೆಗಾಗಿ ಕೇರಳಕ್ಕೆ ಬಂದಿದ್ದು, ಅಲ್ಲಿ ಸೊಂಪಾಗಿ ಬೆಳೆಯುತ್ತಿದ್ದ ತೆಂಗನ್ನು ನೋಡಿ ಆನಂದಿಸಿ, ಅದನ್ನು ಸಿಂಹಳದಲ್ಲೂ ಬೆಳೆಯಲು ಏರ್ಪಡಿಸಿದನಂತೆ. ಇನ್ನೊಂದು ಕಥೆಯ ಪ್ರಕಾರ, ತೆಂಗನ್ನು ನಾಗಲೋಕದಿಂದ ತಂದು ಭಾರತದಲ್ಲಿ ಬೆಳಸಲಾಗಿತ್ತೆಂದೂ ಅಲ್ಲಿಂದ ಅದನ್ನು ಸಿಂಹಳಕ್ಕೂ ತರಲಾಯಿ ತೆಂದೂ ವಿವರಿಸಲಾಗಿದೆ. ಆದ್ದರಿಂದ ಸಿಂಹಳದಲ್ಲಿ ತೆಂಗಿನ ಬೆಳೆ ಬಹು ಪುರಾತನವಾದುದ್ದಲ್ಲವೆಂದು ಊಹಿಸಬಹುದಾಗಿದೆ.

ಭಾರತದಲ್ಲಿ ಬಹು ಹಿಂದಿನಿಂದಲೂ ತೆಂಗು ಬೆಳೆಯುತ್ತಿತ್ತೆಂದು ತಿಳಿದುಬರುತ್ತದೆ. ಪೂರ್ವಿಕರು 'ನಾರೀಕೇಳ ಫಲ'ವೆಂದು ಅದಕ್ಕೆ ಯಜ್ಞಯಾಗಾದಿಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾರೆ. ನೀರು ತುಂಬಿದ ಚೊಂಬಿನ ಮೇಲೆ ತೆಂಗಿನಕಾಯಿಯನ್ನಿಟ್ಟು ಶುಭಸೂಚಕ ಕಲಶವೆಂದೂ, ವರುಣದೇವರ ಪ್ರತಿಯೆಂದೂ ಪೂಜಿಸಲಾಗುತ್ತಿದೆ. ವಿಷ್ಣು, ಮತ್ಸ್ಯ, ಮಾರ್ಕಂಡೇಯ ಮತ್ತು ಬ್ರಹ್ಮಾಂಡ ಪುರಾಣ ಗಳಲ್ಲಿ ಅದರ ಉಲ್ಲೇಖವಿದೆ. ರಾಮಾಯಣ, ಮಹಾಭಾರತ

ಗಳಲ್ಲೂ ಅದರ ಪೂರ್ಣ ವಿವರಣೆಯಿದೆ. ಪುರಾತನ ತಮಿಳು ಗ್ರಂಥ
ವಾದ "ಪೊರಾಕರಟ್ಟುಪಡ್ಯೆ"ನಲ್ಲೂ, ತಾಂತ್ರಿಕ ಗ್ರಂಥಗಳಲ್ಲೂ
ಅದನ್ನು ಶಿವಾರಾಧನೆಯಲ್ಲಿ ಒಂದು ಮುಖ್ಯಾಂಶವೆಂದು ನಿರೂಪಿಸ
ಲಾಗಿದೆ. ಕೊಂಕಣದಲ್ಲಿ ಈಗಲೂ ನಾರಿಯಲ್ ಪೂರ್ಣಮಿಯ
ದಿನ ಅದನ್ನು ವರುಣದೇವರಿಗೆ ಅರ್ಪಿಸಿ ಪೂಜಿಸುತ್ತಾರೆ. ಇದಕ್ಕೆ
ಸಂಬಂಧಪಟ್ಟ ಕಥೆ ಸ್ವಾರಸ್ಯವಾಗಿದೆ. ಕಾರ್ತವೀರಾರ್ಜುನನ
ಮಕ್ಕಳಿಂದ ಹತಗೊಂಡ ಜಮದಗ್ನಿಯ ಪತ್ನಿ ರೇಣುಕಾದೇವಿ ಸತಿ
ಯಾಗುವ ಮುನ್ನ ಪರಶುರಾಮನಿಂದ ವಚನ ಪಡೆದಳೆಂದೂ,
ಅದರಂತೆ ಪರಶುರಾಮ ತನಗೆ ಶಿವಪ್ರಸಾದಿತವಾದ ಪರಶುವಿನಿಂದ
(ಕೊಡಲಿ) ೨೧ ಸಲ ಭೂಮಿಯಲ್ಲಿನ ಕ್ಷತ್ರಿಯರನ್ನೆಲ್ಲಾ ಧ್ವಂಸ
ಮಾಡಿ, ಪಾಪಪರಿಹಾರಾರ್ಥವಾಗಿ ಯಜ್ಞಮಾಡಲು, ಅವನ ಗುರು
ಕಶ್ಯಪರು ಉಳಿದ ಕ್ಷತ್ರಿಯರ ರಕ್ಷಣೆಗಾಗಿ ಪರಶುರಾಮ ಗೆದ್ದಿದ್ದ
ಸಮಸ್ತ ಭೂಮಿಯನ್ನೂ ಗುರುದಕ್ಷಿಣೆಯಾಗಿ ದಾನ ಪಡೆದು, ತನ್ನ
ರಾಜ್ಯದಲ್ಲಿ ಆತ ಇರಕೂಡದೆಂದು ಆಜ್ಞೆಮಾಡಿದನಂತೆ. ಅದರಂತೆ
ಪರಶುರಾಮ ಪಶ್ಚಿಮಘಟ್ಟಗಳ ತುದಿಯಲ್ಲಿ ನಿಂತು ಸಾಗರನಿಂದ
(ಸಮುದ್ರದಿಂದ) ಭೂಮಿಯನ್ನು ಯಾಚಿಸಿ, ಅವನ ಆಜ್ಞಾನುಸಾರ
ಕೈಯಲ್ಲಿದ್ದ ಪರಶುವನ್ನು ಸಮುದ್ರದಲ್ಲಿ ದೂರ ಎಸೆದನಂತೆ. ಪರಶು
ಬಿದ್ದಷ್ಟು ದೂರದ ಭೂಮಿಯನ್ನು ಹೊಸತಾಗಿ ಸಮುದ್ರನಿಂದ
ಪಡೆದು, ಅಲ್ಲಿ ಜನರನ್ನು ತಂದು ನೆಲೆಸಿ ತಾನು ತಪಸ್ಸಿಗಾಗಿ
ಮಹೇಂದ್ರ ಪರ್ವತಕ್ಕೆ ತೆರಳಿದನಂತೆ. ಹೋಗುವ ಮುಂಚೆ ಆ
ಜನರ ಉಪಯೋಗಕ್ಕಾಗಿ ದೇವಲೋಕದಿಂದ "ದೇವವೃಕ್ಷವನ್ನು"
ತಂದು ಅವರಿಗೆ ಕೊಟ್ಟನಂತೆ. ಅದೇ ತೆಂಗಿನಮರ. ತೆಂಗು
ಅಥವಾ ನಾರಿಕೇಳದ ನಾಡೇ ಕೇರಳವೆಂದು ಮುಂದೆ ಪ್ರಸಿದ್ಧ
ವಾಯಿತು. 'ಕೇರಳ' ವೆಂದರೆ ತೆಂಗಿನ-ನಾಡೆಂದೇ ಅರ್ಥ.

ತೆಂಗು ಭಾರತದಲ್ಲಿ ಪುರಾತನ ಕಾಲದಿಂದಲೂ ಬಹು ಪ್ರಸಿದ್ಧಿ ಪಡೆದ ವೃಕ್ಷವಾಗಿದ್ದರೂ, ವೇದಗಳಲ್ಲಿ ಅದರ ಉಲ್ಲೇಖವಿಲ್ಲ. ಆದ್ದರಿಂದ ವೇದಗಳ ಕಾಲದಲ್ಲಿ ಅವು ಭಾರತದಲ್ಲಿ ಬೆಳೆಯುತ್ತಿರಲಿಲ್ಲವೆಂದೂ, ಮುಂದೆ ಅದು ಪರದೇಶಗಳಿಂದ ಬಂದು ಹರಡಿರಬಹುದೆಂದೂ ತೋರುತ್ತದೆ. ಅದರ ಬೆಳೆವಣಿಗೆ ನಮ್ಮ ದೇಶದಲ್ಲಿ ಬಹು ಬೇಗ ಹೆಚ್ಚಿರಬೇಕು. ಕ್ರಿ. ಪೂ.ದಲ್ಲೇ ಅರಬ್ಬೀ ದೇಶದ ವರ್ತಕರು ತೆಂಗನ್ನು ಭಾರತದ ಹಣ್ಣೆಂದು ಅನೇಕ ವೇಳೆ ವರ್ಣಿಸಿದ್ದಾರೆ. ಸಿಂಹಳದಲ್ಲಿ ಕ್ರಿ.ಪೂ. ೨೦೦ಕ್ಕೆ ಮುಂಚೆಯೇ ಹರಡಿದ್ದ ತೆಂಗು ಭಾರತದಿಂದ ಅಲ್ಲಿಗೆ ಬಂದದ್ದಾಗಿದೆ. ಕ್ರಿ. ಶ. ೬ನೇ ಶತಮಾನದಲ್ಲಿ "ಕಾಸ್‌ಮಸ್" ತೆಂಗನ್ನು ಅದರ ಸಂಸ್ಕೃತ ಹೆಸರಿನಿಂದಲೇ ವರ್ಣಿಸಿದ್ದಾನೆ. ಪ್ರಸಿದ್ಧ ಪ್ರವಾಸಿಗನಾದ ಮಾರ್ಕೊಪೋಲೋ ಅದನ್ನು ಭಾರತದ ಫಲವೆಂದೇ ವಿವರಿಸಿದ್ದಾನೆ. ಆದರೆ ಇವೆಲ್ಲವೂ ಇತ್ತೀಚಿನವು. ಪರಶುರಾಮನೇ ಅದನ್ನು ಬೇರೆಡೆಯಿಂದ ತಂದನೆಂಬ ಪುರಾಣಕಥೆಯಿಂದಲೂ, ವೇದಗಳಲ್ಲಿ ಅದರ ಉಲ್ಲೇಖನೆಯಿರುವುದರಿಂದಲೂ, ತೆಂಗು ಭಾರತದಲ್ಲಿ ಉತ್ಪನ್ನವಾಗಲಿಲ್ಲವೆಂದು ಖಚಿತವಾಗಿ ಹೇಳಬಹುದಾಗಿದೆ.

ಏಷ್ಯಾ ಖಂಡದ ಆಗ್ನೇಯ ಭಾಗದಲ್ಲಿ ಮುಖ್ಯ ದೇಶಗಳಾದ, ಸುಮಾತ್ರ, ಜಾವ, ಬೋರ್ನಿಯೋ, ಈಸ್ಟ್ ಇಂಡೀಸ್, ಫಿಲಿಪೈನ್ಸ್ ಮೊದಲಾದ ದ್ವೀಪಗಳಲ್ಲಿ ತೆಂಗು ಮತ್ತು ಅದರ ಸಂಬಂಧಿಕ ಗಿಡಗಳು ಸ್ವಾಭಾವಿಕವಾಗಿ ಹೇರಳವಾಗಿ ಬೆಳೆದಿವೆ. ಅಲ್ಲಿ ತೆಂಗಿಗೆ ಬೇಕಾದ ಭೂ ಮತ್ತು ವಾಯುಗುಣಗಳಿದ್ದು, ಅವು ಸೊಂಪಾಗಿ ಬೆಳೆದು ಹೆಚ್ಚಿನ ಫಲದಾಯಕವಾಗಲು ಸಹಕಾರಿಯಾಗಿದೆ. ತೆಂಗಿಗೆ ಸುಮಾರು ೧೮೦ ವಿವಿಧ ಹೆಸರುಗಳಿದ್ದು, ಅದರ ವಿಚಾರದಲ್ಲಿ ಅನೇಕ ಪುರಾತನ ಕಥೆಗಳಿವೆ. ಇತ್ತೀಚಿನ ಸಂಶೋ

ಧನೆಗಳಿಂದ ಯಾವುವೇ ಬೆಳೆಗೆ ಬರಬಹುದಾದ ಕ್ರಿಮಿಕೀಟಗಳು ಬಹು ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲಿರುತ್ತವೆಯೋ ಅಂಥ ಸ್ಥಳದಲ್ಲಿ ಆ ಬೆಳೆ ಬಹು ಪುರಾತನ ಕಾಲದಿಂದಲೂ ಇತ್ತೆಂದು ಊಹಿಸಬಹು ದೆಂದು ನಿರ್ಧರಿಸಲಾಗಿದೆ. ಈ ದ್ವೀಪಗಳಲ್ಲೇ ತೆಂಗಿಗೆ ಉಪದ್ರವ ಕಾರಿಯಾದ ಅತಿ ಹೆಚ್ಚಿನ ಕೀಟ ಸಂಖ್ಯೆಯಿರುವುದು ತಿಳಿದು ಬಂದಿದೆ. ಇವೆಲ್ಲದರ ಆಧಾರದಿಂದ ತೆಂಗು ಮೊಟ್ಟಮೊದಲು ಶಾಂತಿ ಸಾಗರದ ದ್ವೀಪಸ್ತೋಮಗಳಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಗಿರ ಬಹುದೆಂದು ಹೇಳಬಹುದಾಗಿದೆ.

ಶಾಂತಿಸಾಗರದ ದ್ವೀಪಗಳಿಂದ ತೆಂಗು ಪೂರ್ವದಲ್ಲಿರುವ ಅಮೆ ರಿಕಾ ಪ್ರದೇಶಕ್ಕೂ, ಪಶ್ಚಿಮದಲ್ಲಿರುವ ಭಾರತ, ಮೆಡಗಾಸ್ಕರ್ ದೇಶಗಳಿಗೂ ಹರಡಿರಬಹುದಾಗಿದೆ. ಅದರ ಉಪಯುಕ್ತತೆಯೇ ಅದರ ಹೆಚ್ಚಳಕ್ಕೆ ಕಾರಣವಾಯಿತು. ಉಪ್ಪುನೀರಿನಲ್ಲಿ ಬಹುಕಾಲ ವಿದ್ದಲ್ಲಿ ನೀರನ್ನು ನಾರು ಹೀರಿ ಕಾಯಿ ಕೊಳೆಯಬಹುದಾದ್ದರಿಂದ ಜನರಿಂದಲೇ ಬೀಜದ ಪ್ರಸಾರ ನಡೆದಿರಬೇಕು. ಪೂರ್ವದಿಂದಲೂ ವಿವಿಧ ದೇಶಗಳ ಮಧ್ಯೆ ವ್ಯಾಪಾರ ಸಂಬಂಧವಿದ್ದುದರಿಂದ ತೆಂಗು ಸುಲಭವಾಗಿ ಹರಡಲು ಅನುಕೂಲವಾಗಿರಬೇಕು.

## ಸಸ್ಯಲಕ್ಷಣ ವಿವರಣೆ

ತೆಂಗು ( ಕಾಕಸ್ ನ್ಯೂಸಿಫೆರಾ, ಲಿನ್ ) ಅಡಕೆ, ಭಗಿನಿ ಮೊದಲಾದ ಏಕಕಾಂಡ ವೃಕ್ಷಗಳ ಗುಂಪಿಗೆ ಸೇರಿದ್ದು, ಅವುಗಳಂತೆ ಉದ್ದವಾಗಿ ಬೆಳೆಯುತ್ತದೆ. ಇವೆಲ್ಲವೂ "ಪಾಮಿಾ" ಎಂಬ ಸಸ್ಯ ನಿಸರ್ಗ ಗುಂಪಿಗೆ ಸೇರಿದವು. ಆದರ ನಿಧಾನ ಬೆಳವಣಿಗೆ, ದೃಢತೆ

ಕೊಡುವ ಬುಡದ ಸಾಂದ್ರತೆ, ಕೊಂಬೆರಹಿತ ಬಿದ್ದ ಎಲೆಗಳ ಮಚ್ಚೆ ಯಿಂದ ಕೂಡಿದ ಸ್ತಂಭಾಕೃತಿಕಾಂಡ, ದೊಡ್ಡಗರಿಗಳು ದಟ್ಟವಾಗಿ ಬೆಳೆದಿರುವ ತುದಿ ಮತ್ತು ಪ್ರತಿ ಎಲೆಗಳ ಮಧ್ಯೆ ಕಾಣುವ ಕಾಯಿಯ ಗೊಂಚಲು— ಬೇರೆ ಯಾವ ಸಸ್ಯದಲ್ಲೂ ಕಂಡು ಬರುವುದಿಲ್ಲ.

ತೆಂಗು ಸುಮಾರು ೫೦–೬೦ ಅಡಿಗಳ ಎತ್ತರ ಬೆಳೆದು ೬೦–೮೦ ವರ್ಷಗಳ ಕಾಲ ಬದುಕಿರುತ್ತದೆ. ಅವುಗಳ ಗಾತ್ರ ಮತ್ತು ಎತ್ತರ, ಮಣ್ಣಿನ ಗುಣ ಮತ್ತು ಹವಾಮಾನಗಳನ್ನು ಹೊಂದಿ ಕೊಂಡಿದ್ದರೂ, ಅವುಗಳಲ್ಲಿ ಹೆಚ್ಚಿನ ಬದಲಾವಣೆಗಳಿರುವುದಿಲ್ಲ. ಕಾಂಡದ ಬುಡವು ದಪ್ಪನಾಗಿ ಬೆಳೆದು ಅನೇಕ ಬೇರುಗಳಿಂದ ಕೂಡಿ ಮರಕ್ಕೆ ದೃಢತೆಕೊಡಲು ಅನುಕೂಲವಾಗಿದೆ. ಕಾಂಡವು ಬಿದ್ದ ಎಲೆಗಳ ಕಂಟಿಕೆಗಳಿಂದ ಕೂಡಿದ್ದು, ಕೊಂಬೆರಹಿತವಾಗಿ ಉದ್ದ ವಾಗಿ ಬೆಳೆಯುತ್ತದೆ. ಬುಡಕ್ಕೂ ತುದಿಗೂ ಕಾಂಡದ ಗಾತ್ರದಲ್ಲಿ ಹೆಚ್ಚಿನ ವ್ಯತ್ಯಾಸವಿರುವುದಿಲ್ಲ. ಸಾಮಾನ್ಯವಾಗಿ ಕಾಂಡ ನೆಟ್ಟಗೆ ಬೆಳೆಯದೆ ಸ್ವಲ್ಪ ಬಾಗಿ ಕಮಾನಿನಂತೆ ಮೇಲಕ್ಕೆ ಬರುತ್ತದೆ.

ಗಿಡದ ಬೆಳವಣಿಗೆಯೆಲ್ಲಾ ತುದಿಯಲ್ಲಿರುವ ಸುಳಿಯನ್ನೇ ಹೊಂದಿಕೊಂಡಿರುವುದರಿಂದ ಅದಕ್ಕಾಗಲೀ ಕಾಂಡದ ಇತರ ಭಾಗಕ್ಕಾಗಲೀ ಆದ ಗಾಯ ಮಾಯದೆ ಹಾಗೇ ಉಳಿಯುತ್ತದೆ. ಎಲೆಗಳ ಬುಡವು ಮುಕ್ಕಾಲುಭಾಗ ಕಾಂಡವನ್ನು ಸುತ್ತುವರಿದಿದ್ದು ಬಿದ್ದಾಗ ಅದರ ಕಲೆ ಕಾಂಡದ ಮೇಲೆ ಎದ್ದು ಕಾಣುತ್ತದೆ. ಎಲೆಗಳು ಒಂದಾದರೊಂದಂತೆ ಉತ್ಪನ್ನವಾಗಿ ಪೂರ್ಣ ಬೆಳೆದು ಬೀಳಲು ಎರಡೂವರೆ-ಮೂರು ವರ್ಷ ಬೇಕಾಗುತ್ತದೆ.

ಕಾಂಡದ ತುದಿಯಲ್ಲಿ ಬೇರೆ ಬೇರೆ ವಯಸ್ಸಿನ ಸುಮಾರು ೩೦–೪೦ ಗರಿಗಳಿರುತ್ತವೆ. ಐದು ಸಾಲುಗಳಾಗಿ ಏರ್ಪಟ್ಟಿರುವ

ಈ ಎಲೆಗಳನ್ನು ಬೇರೆ ಬೇರೆ ನಾಲ್ಕು ಪಂಗಡಗಳಾಗಿ ವಿಂಗಡಿಸ ಬಹುದು.

೧. ತಳಭಾಗದ ೧೦-೧೨ ಎಲೆಗಳು ಬಹಳ ಹಳೆಯುವಾಗಿದ್ದು ಕೆಳಕ್ಕೆ ಬಾಗಿರುತ್ತವೆ. ಅವುಗಳ ಕೋನದಿಂದ ಕಾಯಿಗಳನ್ನು ಕೊಯ್ದಾಗಿದ್ದು ಒಣಗುವುದಕ್ಕೆ ಪ್ರಾರಂಭಿಸಿರುತ್ತವೆ. ಇವು ಗಳಿಂದ ಗಿಡಕ್ಕೆ ಹೆಚ್ಚಿನ ಪ್ರಯೋಜನವಿಲ್ಲ.

೨. ಅದರ ಮೇಲಿನ ೧೦-೧೨ ಎಲೆಗಳು ತಮ್ಮ ಉನ್ನತಾವಸ್ಥೆ ಯಲ್ಲಿದ್ದು ಅವುಗಳ ಕೋನಗಳಲ್ಲಿ ಕಾಯ ಗೊಂಚಲುಗಳು ಬೆಳೆ ವಣಿಗೆಯ ವಿವಿಧಾವಸ್ಥೆಯಲ್ಲಿರುತ್ತದೆ.

೩. ಅದರ ಮೇಲಿನ ೧೦-೧೨ ಎಲೆಗಳು ಇನ್ನೂ ಎಳೆಯ ವಯಸ್ಸಿನ ಪೂರ್ತ ತೆರೆಯದವಾಗಿದ್ದು, ಅವುಗಳ ಕೋನಗಳಲ್ಲಿ ಸಿಂಗಾರಗಳು ವಿವಿಧ ಬೆಳವಣಿಗೆಯಲ್ಲಿರುತ್ತವೆ.

೪. ಸುಳಿಯ ಸುತ್ತಲೂ ಆಗತಾನೆ ತೆರೆಯಲಿರುವ, ಹೊರ ಹೊರಟಿರುವ ಮತ್ತು ಇನ್ನೂ ಪೂರ್ಣವಾಗಿ ಹೊರಬರದಿರುವ ಎಲೆ ಗಳು ನಾಲ್ಕನೇ ಗುಂಪಿಗೆ ಸೇರುತ್ತವೆ.

ಸುಳಿ ಗಿಡದ ತುದಿಯ ಮಧ್ಯಭಾಗದಲ್ಲಿದ್ದು ಇನ್ನೂ ಹೊರ ಹೊರಡದ ಗರಿಗಳಿಂದ ಕೂಡಿ ಎಲೇಕೋಸಿನಂತೆ ಕಾಣುತ್ತದೆ. ಅದರಲ್ಲಿ ಫೊಟ್ಯಾಷ್ ಮತ್ತು ರಂಜಕಾಂಶ ಅಧಿಕವಾಗಿದ್ದು ತಿನ್ನಲೂ ರುಚಿಯಾಗಿರುತ್ತದೆ. ಎಲೆಗಳು ಸುಳಿಯ ಮಧ್ಯಭಾಗದಲ್ಲಿ ಬೆಳೆ ದರೂ, ಕ್ರಮೇಣ ಹೊಸ ಎಲೆಗಳಿಂದ ದೂಡಲ್ಪಟ್ಟು ಬಾಗುತ್ತವೆ. ದಪ್ಪನಾದ ಮಧ್ಯಕಾಂಡದಿಂದ ಕೂಡಿರುವ ಎಲೆಗಳು ೧೨ರಿಂದ ೧೮ ಅಡಿ ಉದ್ದವಿದ್ದು, ಇಕ್ಕೆಡೆಗಳಲ್ಲೂ ಪತ್ರವೃಂದದ ಜೋಡಣೆಯಿಂದ ಕೂಡಿರುತ್ತದೆ. ಪ್ರತಿ ಎಲೆಯಲ್ಲೂ ೨೦೦ರಿಂದ ೩೦೦ ಪತ್ರ

ವೃಂದಗಳು ನುಣುಪಾಗಿಯೂ, ಉದ್ದವಾಗಿಯೂ ಮಧ್ಯರೇಖೆಯ ನ್ನೊಳಗೊಂಡ ಗರಿಗಳಂತೆ ಜೋಡಣೆಯಾಗಿರುತ್ತವೆ.

ಮರಗಳು ಏಕಗೃಹೀಯ ಸಸ್ಯವರ್ಗಕ್ಕೆ ಸೇರಿವೆ. ಆದರೆ ಗಂಡು ಮತ್ತು ಹೆಣ್ಣು ಹೂಗಳು ಒಂದೇ ಸಿಂಗಾರದಲ್ಲಿ ಕಂಡುಬರುತ್ತವೆ. ಸಿಂಗಾರ ಪ್ರಾರಂಭದ ಕಾಲ ಭೂ ಮತ್ತು ವಾಯುಗುಣವನ್ನವ ಲಂಬಿಸಿದೆ. ಗುಜ್ಜ ಗಿಡಗಳು ೩ನೇ ವರ್ಷದಿಂದಲೂ, ಸಾಧಾರಣ ಮರಗಳು ೫–೬ನೇ ವರ್ಷದಿಂದಲೂ ಸಿಂಗಾರ ಉತ್ಪನ್ನ ಮಾಡುತ್ತದೆ. ಶೇಕಡ ೯೦ ಭಾಗ ಗಿಡಗಳು ತಮ್ಮ ೧೦ನೇ ವರ್ಷದೊಳಗೆ ಪೂರ್ಣ ಉತ್ಪತ್ತಿ ಕೊಡುತ್ತವೆ.

ಸಿಂಗಾರಗಳ ಸಂಖ್ಯೆ ಎಲೆಗಳ ಸಂಖ್ಯೆಯನ್ನನುಸರಿಸುತ್ತದೆ. ಪ್ರತಿ ಎಲೆಯ ಕೋನದಲ್ಲೂ ಒಂದು ಸಿಂಗಾರ ಉತ್ಪನ್ನವಾಗುವುದ ರಿಂದ ಎಲೆಗಳು ಹೆಚ್ಚಾಗಿದ್ದಷ್ಟೂ ಸಿಂಗಾರಗಳು ಹೆಚ್ಚುತ್ತವೆ. ಗೊಬ್ಬರ ಮತ್ತು ನೀರಿನ ಪೂರೈಕೆ ಸರಿಯಾಗಿದ್ದಲ್ಲಿ ಅವೆಲ್ಲವೂ ಬೆಳೆ ಯುತ್ತವೆ. ಇಲ್ಲದಿದ್ದಲ್ಲಿ ಕೆಲವು ಹಾಗೆಯೇ ನಶಿಸಿಹೋಗಬಹುದು. ಸಿಂಗಾರವು ಗುಂಡಗೆ ಉದ್ದನೆಯ ಹೊಂಬಾಳೆಯಿಂದ ಮುಚ್ಚಿದ್ದು, ಅರಳಿದಾಗ ಅದರ ನಡುದಿಂಡಿನ ಇಕ್ಕಡೆಗಳಲ್ಲೂ ಜೋಡಿಸಿರುವ ಉಪವಗ್ಗೆಗಳ ಮೇಲೆ ಹೂವು ಒತ್ತೊತ್ತಾಗಿ ಕಂಡುಬರುತ್ತದೆ. ತುದಿಯಲ್ಲಿರುವ ಹೆಚ್ಚಿನ ಗಂಡು ಹೂಗಳು ಮೊದಲು ಅರಳಲು ಪ್ರಾರಂಭಿಸಿ ಸುಮಾರು ೧೮–೨೨ ದಿನಗಳಲ್ಲಿ ಎಲ್ಲವೂ ಅರಳಿ ಉದುರುತ್ತದೆ. ಏಗ್ಗೆಗಳ ಬುಡದಲ್ಲಿ ಹೆಣ್ಣು ಹೂಗಳಿದ್ದು, ಕೊನೆ ಯಲ್ಲಿ ಅರಳಿ ಕಾಯಾಗುತ್ತದೆ. ಪ್ರತಿ ಸಿಂಗಾರದಲ್ಲೂ ೧೬ರಿಂದ ೩೦ ಹೆಣ್ಣು ಹೂಗಳಿರುತ್ತವೆ.

ಒಳ್ಳೆಯ ಫಲವಾದ ಮರದಲ್ಲಿ ವರ್ಷಕ್ಕೆ ೧೦೦ರಿಂದ ೩೦೦ ಹೆಣ್ಣು ಹೂಗಳು ಉತ್ಪನ್ನವಾಗಿ, ೧೮೦–೧೫೦ ಬೆಳೆಯಬಹುದು.

ಕಾಯಿಗಳು ಗಾತ್ರ ಮತ್ತು ಆಕೃತಿಯಲ್ಲಿ ಉರುಟು, ಉದ್ದ ಮತ್ತು ಅಂಡಾಕೃತಿಯಾಗಿರುತ್ತವೆ. ಹಾಗೂ ಹಳದಿ, ಕೆಂಪು ಮಾಸಲು ಮತ್ತು ಹಸಿರು ಬಣ್ಣಗಳಾಗಿರುತ್ತವೆ. ಮೇಲ್ಭಾಗದಲ್ಲಿ ಸಣ್ಣ ಅಂಡಕೋಶವನ್ನೊಳಗೊಂಡ ಬಿಳುಪಾದ ತಿರುಳು ಚಿಪ್ಪಿನಿಂದ ಸುತ್ತುವರಿಯಲ್ಪಟ್ಟಿದ್ದು, ಅದರ ಮೇಲ್ಗಡೆ ನಾರಿನ ದಪ್ಪ ಪದರವಿರುತ್ತದೆ. ನಾರು ಕಾಯಿ ಕೆಳಗೆ ಬಿದ್ದಲ್ಲಿ ಅಂಡಕೋಶಕ್ಕೆ ಹಾನಿಯಾಗದಂತೆ ಕಾಪಾಡುವುದಲ್ಲದೆ, ನೀರಿನಲ್ಲಿ ಬಿದ್ದಲ್ಲಿ ತೇಲಿ ಬೇರೆಡೆ ಬೆಳೆಯಲು ಅನುಕೂಲವಾಗುವಂತೆ ಏರ್ಪಡಿಸಲ್ಪಟ್ಟಿದೆ.

ಕಾಯಿಯ ತಿರುಳೇ ಅನೇಕ ವಿಧದಲ್ಲಿ ಉಪಯುಕ್ತವಾದದ್ದು. ಉದ್ದ ಮರಗಳ ಕಾಯಿ ತಿರುಳು ಮಂದವಾಗಿರುತ್ತದೆ. ಕಾಯಿಯ ಸಂಖ್ಯೆ, ಆಕಾರ ಮತ್ತು ತಿರುಳಿನ ಮಂದವೇ ಮರದ ಶ್ರೇಷ್ಠತೆಯನ್ನು ನಿರ್ಧರಿಸುವುದು. ಗುಜ್ಜು ಮರಗಳ ಮತ್ತು ಬೇಗ ಉತ್ಪನ್ನ ನೀಡುವ ಮರಗಳಲ್ಲಿ ತಿರುಳು ಸಾಮಾನ್ಯವಾಗಿ ತೆಳುವಾಗಿರುತ್ತದೆ.

ತೆಂಗಿನಲ್ಲಿ ವಿವಿಧ ಜಾತಿಗಳಿಲ್ಲ. ಅದರ ಕಾಯಿಗಳ ಗಾತ್ರ, ಬಣ್ಣ ಮತ್ತು ಆಕಾರಗಳಿಂದ ವಿವಿಧ ಗುಂಪುಗಳನ್ನು ನಿರ್ಧರಿಸಬಹುದಾದರೂ ಅವುಗಳಲ್ಲಿ ಅನೇಕ ಬದಲಾವಣೆಗಳು ಕಂಡುಬರುತ್ತವೆ. ಬಣ್ಣದ ಆಧಾರದಿಂದ ಹಸಿರು, ಕೆಂದು ಎಂದು ಎರಡು ಮುಖ್ಯ ಜಾತಿಗಳನ್ನು ಮೈಸೂರಿನಲ್ಲಿ ವಿಂಗಡಿಸಿದ್ದರೂ, ಅವುಗಳ ಉಪಯುಕ್ತತೆಯಲ್ಲಿ, ರುಚಿಯಲ್ಲಿ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ.

ಕಾಯಿಯ ಗಾತ್ರ ಮತ್ತು ಆಕಾರದ ಆಧಾರದಿಂದ ಭಾರತದಲ್ಲಿ ಸುಮಾರು ೩೫ ಗುಂಪುಗಳನ್ನೂ, ಮಲಯಾದಲ್ಲಿ ೫೦ ಗುಂಪುಗಳನ್ನೂ, ಸಿಂಹಳದಲ್ಲಿ ೧೯ ಗುಂಪುಗಳನ್ನೂ, ಫಿಲಿಪೈನ್ಸ್‌ನಲ್ಲಿ ೪೦ ಗುಂಪುಗಳನ್ನೂ ಪ್ರತ್ಯೇಕಿಸಿ ವಿವರಿಸಿದ್ದಾರೆ. ಪ್ರಪಂಚದ ಎಲ್ಲಾ

ಕಾಯಿಗಳನ್ನು ಶೇಕರಿಸಿ ಹೀಗೆ ಮಾಡಿದಲ್ಲಿ ಬಹುಶಃ ೭೮ ಗುಂಪು ಗಳನ್ನು ಹೀಗೆ ವಿಂಗಡಿಸಬಹುದು.

ಮರದ ಬೆಳೆವಣಿಗೆ ಮತ್ತು ಫಲಾವಧಿಯ ಆಧಾರದಿಂದ ಗುಜ್ಜ ಮರಗಳು ಮತ್ತು ದೊಡ್ಡ ಮರಗಳು ಎಂದು ಎರಡು ಪಂಗಡಗಳನ್ನು ವಿಂಗಡಿಸಬಹುದು. ಇವುಗಳಿಗೆ ಹೆಚ್ಚಿನ ವ್ಯತ್ಯಾಸವಿದೆ.

ಗುಜ್ಜ ಮರಗಳು ಯಾವಾಗ, ಹೇಗೆ, ಎಲ್ಲಿ ಉತ್ಪತ್ತಿಯಾದ ವೆಂಬುದು ತಿಳಿದುಬಂದಿಲ್ಲ. ಬಹುಶಃ ಸ್ವಾಭಾವಿಕವಾಗಿ ಜಾವಾ ದ್ವೀಪಗಳಲ್ಲಿ ಪ್ರಾರಂಭವಾಗಿರಬೇಕು. ಬೇರೆ ಬೇರೆ ಗುಜ್ಜ ಜಾತಿಯ ಮರಗಳು ಬೇರೆ ಬೇರೆ ದೇಶಗಳಲ್ಲಿ ಉತ್ಪತ್ತಿಯಾಗಿರುವುದು ಕಂಡು ಬಂದಿದೆ. ಅವುಗಳಲ್ಲಿ ಹಸಿರು, ಬಿಳೀ, ಹಳದೀ ಮತ್ತು ಕೆಂಪು ಬಣ್ಣದ ಕಾಯಿಗಳನ್ನು ಉತ್ಪತ್ತಿಮಾಡುವ ಒಟ್ಟು ೧೭ ಜಾತಿ ಗಳಿವೆ. ಆ ಮರಗಳು ಕೇವಲ ೩–೪ ವರ್ಷಗಳಲ್ಲೇ ಫಲ ಕೊಡಲು ಪ್ರಾರಂಭಿಸುತ್ತವಾದರೂ, ಅದರ ತಿರುಳು ತೆಳ್ಳಗೆ ಮೃದುವಾಗಿದ್ದು ಒಳ್ಳೆಯ ಕೊಬ್ಬರಿ ಉತ್ಪನ್ನ ಮಾಡಲು ಸಾಧ್ಯವಿಲ್ಲ. ಅವುಗಳನ್ನು ಮನೆಗಳಲ್ಲಿ ಎಳನೀರು ಮತ್ತು ಅಲಂಕಾರಕ್ಕಾಗಿ ಬೆಳಸಬಹುದು. ಒಳ್ಳೆಯ ತೋಟಗಳಲ್ಲಿ ಬೆಳೆಸುವುದು ಲಾಭದಾಯಕವಲ್ಲ. ಅವಕ್ಕೆ ಹೆಚ್ಚಿನ ಗೊಬ್ಬರ ಮತ್ತು ನೀರಿನ ಆವಶ್ಯಕತೆ ಇದೆ.

ಉದ್ದ ಮರಗಳು ನಿಧಾನವಾಗಿ ಬೆಳೆದರೂ ಅದರಿಂದ ಅನುಕೂಲ ಹೆಚ್ಚು. ಇಳುವರಿ ಒಂದೇ ಸಮನಾಗಿದ್ದು ಅದರ ತಿರುಳು ಮಂದ ವಾಗಿ ಗಟ್ಟಿಯಾಗಿರುತ್ತದೆ. ಅಲ್ಲದೆ ಎಲ್ಲಾ ಭೂಮಿಯಲ್ಲೂ ಚೆನ್ನಾಗಿ ಬೆಳೆಯುತ್ತವೆ. ಸುಮಾರು ೬೦೦೦ ಕಾಯಿಗಳು ಒಂದು ಟನ್ ಕೊಬ್ಬರಿಯನ್ನು ಕೊಡಬಲ್ಲವು.

ಇವಲ್ಲದೆ ಕೆಲವು ಮುಖ್ಯ ಜಾತಿಗಳೂ ವಿವರಿಸಲ್ಪಟ್ಟಿವೆ. ಕವ ಲೊಡೆಯದ ಸಿಂಗಾರ ಎಗ್ಗೆಗಳಿಂದ ಕೂಡಿದ ‘ ಸ್ಪೈಕೇಟ್ ’ ಎಂಬ

ಜಾತಿ ಕಡಮೆ ಕಾಯಿಗಳನ್ನು ಉತ್ಪತ್ತಿಮಾಡುತ್ತದೆ. ಅವುಗಳಿಗ ಉದ್ದನೆಯ ತೊಟ್ಟು ಇರುವುದಿಲ್ಲ. "ಕೇತ ತಳಿ" ಎಂಬ ಜಾತಿಯ ಕಾಯಿಯ ಮೇಲಿನ ಸಿಪ್ಪೆ ನಾರಿಲ್ಲದೆ ಮೃದುವಾಗಿದ್ದು ತಿನ್ನ ಬಹುದಾಗಿದೆ. ಹಾಗೆಯೇ "ಕೌಮಾನಿಸ್" ಎಂಬ ಜಾತಿಯ ಸಿಪ್ಪೆ ಬಹು ರುಚಿಯಾಗಿದ್ದು ತಿನ್ನಬಹುದಾಗಿದೆ. "ಮಾಕಪೂನ" ಜಾತಿಯ ಕಾಯಿಯಲ್ಲಿ ಗಟ್ಟಿ ತಿರುಳಿಗೆ ಬದಲು ಮೃದುವಾಗಿ ಲೋಳೆಯಾಗಿರುವ ತಿರುಳಿರುತ್ತದೆ. "ತೈರುತೆಂಗೆ" ಎಂಬ ಕೇರಳದ ಜಾತಿಯ ಕಾಯಿಯಲ್ಲಿ ತಿರುಳಿಗೆ ಬದಲು ಪೂರ್ತ ಮೊಸರಿನಂತಿರುವ ರುಚಿಕರವಾದ ತಿರುಳಿನಿಂದ ತುಂಬಿರುತ್ತದೆ. ತಿಪಟೂರಿನ "ಗಂಗ ಪಾಣಿ" ತೆಂಗಿನಲ್ಲಿ ಕಾಯಿ ಉದ್ದವಾಗಿದ್ದು ಹೆಚ್ಚಿನ ಸಿಹಿಯಾದ ನೀರಿನಿಂದ ತುಂಬಿರುತ್ತದೆ.

ಇತ್ತೀಚೆಗೆ ಗಿಡ್ಡ ಮತ್ತು ಉದ್ದ ವಿಧಗಳ ಸಲಕರಣದಿಂದ 'ಹೈಬ್ರಿಡ್' ತಳಿಯನ್ನು ತಯಾರಿಸಲಾಗುತ್ತಿದೆ. ಇದು ಅಧಿಕ ಇಳುವರಿ ಕೊಡಬಲ್ಲ ಉತ್ತಮ ತಳಿ. ಇದನ್ನು ಬೆಳೆಸುವುದು ಉತ್ತಮ.

## ಸಸಿ ಉತ್ಪನ್ನ

ಬೆಳೆಯುವ ಪೈರು ಮೊಳಕೆಯನ್ನನುಸರಿಸುತ್ತದೆ. ಆದ್ದರಿಂದ ಬೀಜದ ಆಯ್ಕೆ ಬೆಳೆಗೆ ಬಹು ಮುಖ್ಯ. ಅದರಲ್ಲೂ ಬಹುವಾರ್ಷಿಕ ಬೆಳೆಗಳಲ್ಲಿ ಬೀಜದ ಆಯ್ಕೆಗೆ ಗಮನವೀಯಬೇಕು. ತೆಂಗು ಏಕದಳ ಗುಂಪಿಗೆ ಸೇರಿದ್ದು, ಸಸಿಗಳನ್ನು ಬೀಜದಿಂದಲೇ ಉತ್ಪನಮಾಡ ಬೇಕಾಗಿದೆ. ಅವು ಪರಕೀಯ ಪರಾಗ ಸಂಪರ್ಕ ಗಿಡಗಳ ಗುಂಪಿಗೆ ಸೇರಿಸುವುದರಿಂದ ಅವುಗಳ ಪೀಳಿಗೆಗಳಲ್ಲಿ ವ್ಯತ್ಯಾಸ ಉಂಟಾಗು

ವುದು ಸಹಜ. ಆದರೆ ಕೆಲವು ಮುಖ್ಯಾಂಶಗಳನ್ನು ಗಮನದಲ್ಲಿಟ್ಟು ಬೀಜವನ್ನಾರಿಸಿದರೆ ಸಾಧ್ಯವಾದಷ್ಟು ಗಿಡಗಳು ಒಂದೇ ರೀತಿಯಲ್ಲಿರಲು ಸಾಧ್ಯ.

ಇದರಲ್ಲಿ ಗಮನಿಸಬೇಕಾದ ಮುಖ್ಯಾಂಶಗಳು ಹಲವಿವೆ. ಮುಖ್ಯವಾಗಿ ಪ್ರತಿ ವರ್ಷವೂ ಒಳ್ಳೆಯ ಫಸಲು ಕೊಡುವ ತೋಟಗಳಿಗೆ ಹೆಸರಾಂತ ಪ್ರದೇಶವನ್ನು ಚುನಾಯಿಸಿಕೊಳ್ಳಬೇಕು. ಅಲ್ಲಿ ಹೆಚ್ಚಾದ ಉತ್ಪತ್ತಿ ಕೊಡುವ ತೋಟವನ್ನು ಆರಿಸಿ ಅದರಲ್ಲಿ ತಾಯಿಮರಗಳನ್ನು ಆಯ್ದು ಗುರುತಿಸಬೇಕು. ಉತ್ತಮ ಇಳುವರಿಯೇ ತಾಯಿಮರದ ಆಯ್ಕೆಗೆ ಆಧಾರವಾಗಿರಬೇಕು. ತಾಯಿಮರ ಪ್ರತಿ ವರ್ಷ ೮೦-೧೦೦ ಕಾಯಿಗಳಿಗೆ ಕಡಮೆಯಿಲ್ಲದೆ ಉತ್ಪತ್ತಿ ಕೊಡಬೇಕು. ಮರಗಳು ರೋಗರಹಿತವಾಗಿದ್ದು ಅದರ ತುದಿ ಹಸುರಾದ ಹೆಚ್ಚು ಎಲೆಗಳಿಂದ ಕೂಡಿರಬೇಕು. ಕಾಯಿಗಳು ದುಂಡಾಗಿ ಸಾಮಾನ್ಯ ಗಾತ್ರದವಾಗಿದ್ದು ಹೆಚ್ಚಿನ ತೂಕವಿರಬೇಕು. ಒಳಗಿನ ತಿರುಳು ದಪ್ಪವಾಗಿರಬೇಕು. ಕಾಯಿ ದಪ್ಪಗಿದ್ದು ತಿರುಳು ತೆಳುವಾಗಿದ್ದಲ್ಲಿ ಪ್ರಯೋಜನವಿಲ್ಲ. ಮರದ ವಯಸ್ಸು ಅಷ್ಟೇನೂ ಮುಖ್ಯವಲ್ಲ. ಕೆಲವೆಡೆ ಹಳೆಯ ಮರಗಳಿಂದಲೂ ಕೆಲವೆಡೆ ಎಳೆಯ ಮರಗಳಿಂದಲೂ ಬೀಜಕ್ಕಾಗಿ ಕಾಯನ್ನು ಆಯ್ದುಕೊಳ್ಳುವರಾದರೂ, ಅವುಗಳ ಪರೀಕ್ಷೆಯಿಂದ ಇವುಗಳಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದೆ, ಅವು ಸಸಿಗಳ ಮೇಲೂ ಯಾವ ಪರಿಣಾಮವನ್ನೂ ಬೀರುವುದಿಲ್ಲವೆಂದು ವ್ಯಕ್ತಪಟ್ಟಿದೆ.

ಚುನಾಯಿತ ತಾಯಿಮರಗಳನ್ನು ಗುರುತಿಸಿ ಅವುಗಳಲ್ಲಿನ ಕಾಯಿ ಚೆನ್ನಾಗಿ ಬಲಿತಾಗ ಮಾತ್ರ ಅವನ್ನು ಬೀಜಕ್ಕಾಗಿ ಕೊಯ್ಯಬೇಕು. ಸಾಧ್ಯವಾದಲ್ಲಿ ಪೂರ್ತಿ ಹಣ್ಣಾಗಿ ಒಣಗಿ ಉದುರಿದವನ್ನು ಮಾತ್ರ ಆರಿಸಿಕೊಳ್ಳಬೇಕು. ೧೨ ತಿಂಗಳಿಗೆ ಮೇಲ್ಪಟ್ಟು ವಯಸ್ಸಾದ

ಗೊಂಚಲು ಬೀಜಕ್ಕೆ ಯೋಗ್ಯ. ಇಂತಹ ಗೊಂಚಲುಗಳಿಂದಲೂ ದುಂಡಗೆ ಭಾರವಾದ ಕಾಯಿಗಳನ್ನು ಮಾತ್ರ ಬೀಜಕ್ಕಾಗಿ ಆರಿಸ ಬೇಕು. ಅನೇಕ ವೇಳೆ ಒಂದೇ ಗೊಂಚಲಲ್ಲಿ ಕೆಲವು ಭಾರವಿಲ್ಲದ ಅಪ್ರಯೋಜಕ ಕಾಯಿಗಳೂ ಇರಬಹುದಾದ್ದರಿಂದ ಅಂಥಹವನ್ನು ನಿರಾಕರಿಸಬೇಕು. ಫೆಬ್ರುವರಿ–ಮೇ ತಿಂಗಳ ಮಧ್ಯಕಾಲದಲ್ಲಿ ದೊರ ಕುವ ಬಿತ್ತನೆ ಭಾರವಾಗಿದ್ದು ಉತ್ತಮವಾಗಿರುತ್ತದೆ.

ಬಿತ್ತನೆಯ ತಳ್ಳನ್ನು (ಬೀಜದ ಕಾಯಿ) ಒಂದು ತಿಂಗಳ ಕಾಲ ನೆರಳಿನಲ್ಲಿಟ್ಟು ಒಣಗಿಸಬೇಕು. ಇದರಿಂದ ನಾರಿನಲ್ಲಿನ ತೇವಾಂಶ ಕಡಮೆಯಾಗುತ್ತದೆ. ಫೆಬ್ರುವರಿ, ಮಾರ್ಚಿ ತಿಂಗಳುಗಳಲ್ಲಿ ಕೊಯ್ದ ಕಾಯಿಗಳನ್ನು ಹೆಚ್ಚು ಕಾಲ ಇಡಬೇಕಾಗುವುದರಿಂದಲೂ, ಆಗ ಹೆಚ್ಚಿನ ಉಷ್ಣಾಂಶ ಇರುವುದರಿಂದಲೂ ಆ ಕಾಯಿಗಳನ್ನು ನೆರಳಿರು ವೆಡೆ ದಟ್ಟವಾಗಿ ಮರಳನ್ನು ಹರಡಿ ಅದರಲ್ಲಿ ಕಾಯಿಗಳು ಮುಚ್ಚು ವಂತೆ ಹೂತಿಡಬೇಕು. ಆದರೆ ಕಾಯಿಯ ತೊಟ್ಟು ಮಾತ್ರ ಯಾವಾಗಲೂ ಮೇಲಿರುವಂತೆ ಎಚ್ಚರ ವಹಿಸಬೇಕು.

ಮರಳು ಅಥವಾ ಮರಳುಮಿಶ್ರಿತ ಭೂಮಿ ಸಸಿ ಬೆಳೆಯಲು ಉತ್ತಮ. ಅದಕ್ಕೆ ನೀರಿನ ಸೌಲಭ್ಯವೂ ಅಗತ್ಯ. ಬೇರೆ ವಿಧವಾದ ಭೂಮಿಗಳಲ್ಲಿ ಮರುಳು ಮಿಶ್ರಮಾಡಬೇಕು. ಪಾತಿಗೆ ಹೆಚ್ಚಿನ ನೆರಳಿರಕೂಡದು. ಬಿಸಿಲು ಚೆನ್ನಾಗಿ ಬೀಳುವೆಡೆ, ಸುಮಾರು ೪–೫ ಅಡಿ ಅಗಲದ, ಸಾಕಷ್ಟು ಉದ್ದದ ಮಡಿಗಳನ್ನು ಮಾಡಿ, ಅವುಗಳ ಮಧ್ಯೆ ಕಾಲುವೆಗಳನ್ನೇರ್ಪಡಿಸಬೇಕು. ಇದರಿಂದ ಮಡಿಗಳನ್ನು ತುಳಿಯದೆ ನೀರು ಹಾಯಿಸಲೂ, ಕಳೇ ತೆಗೆಯಲೂ ಅನುಕೂಲ ವಾಗುತ್ತದೆ.

ಕಾಯಿಯ ತೊಟ್ಟು ಮೇಲಿರುವಂತೆ ನೇರವಾಗಿಯಾಗಲೀ ಅಥವಾ ಅಡ್ಡಲಾಗಿಯಾಗಲೀ ನೆಡಬೇಕು. ಅಡ್ಡಲಾಗಿ ನೆಡುವಾಗ

ಕಾಯಿಯ ಅಗಲವಾದ ಭಾಗ ಮೇಲಿರುವಂತೆ ಮಲಗಿಸಿ ನೆಡಬೇಕು. ಇದರಿಂದ ಸಸಿಗಳು ಚೆನ್ನಾಗಿ ಬೆಳೆಯುತ್ತವೆ. ಒಂದು ವರ್ಷದ ಸಸಿಗಳನ್ನು ಕಿತ್ತು ಉಪಯೋಗಿಸುವಲ್ಲಿ ಬೀಜದಿಂದ ಬೀಜಕ್ಕೆ ೧೦ ರಿಂದ ೧೫ ಅಂಗುಲ ಅಂತರ ಕೊಡಬೇಕು. ಎರಡು ಮೂರು ವರ್ಷ ಬಿಡುವಲ್ಲಿ ೨೧/೨ ಯಿಂದ ೪ ೧/೨ ಅಡಿ ಅಂತರ ಕೊಡುವುದು ಒಳ್ಳೆಯದು. ಕಾಯಿಗಳನ್ನು ಆಳವಾಗಿ ನೆಡಬಾರದು. ನೆಟ್ಟಮೇಲೆ ಅದರ ತೊಟ್ಟು ಅಥವಾ ಮೇಲುಭಾಗ ಕಾಣುತ್ತಿರಬೇಕು. ಮೇ ಅಥವಾ ಜೂನ್ ತಿಂಗಳ ಮಳೆ ಪ್ರಾರಂಭವಾದೊಡನೇ ಕಾಯಿ ನೆಡುವುದರಿಂದ ಹೆಚ್ಚಾಗಿ ಮೊಳಕೆ ಬರುತ್ತವೆ.

ಮಳೆ ಬಾರದಿದ್ದಲ್ಲಿ ವಾರಕ್ಕೆರಡಾವರ್ತಿಯಾದರೂ ನೀರು ಕೊಡಬೇಕು. ಬಿಸಿಲು ಬಹು ತೀಕ್ಷ್ಣವಾದಲ್ಲಿ, ಸೊಪ್ಪು ಅಥವಾ ಹುಲ್ಲನ್ನು ಮಡಿಗಳ ಮೇಲೆ ಹರಡಿ ನೆರಳು ಕೊಟ್ಟಲ್ಲಿ ಸಸಿಗಳಿಗೆ ಬಹಳ ಅನುಕೂಲವಾಗುತ್ತದೆ. ಬೇಸಿಗೆಯಲ್ಲಿ ನೆರಳು ಕೊಟ್ಟಲ್ಲಿ ಸಸಿಗಳು ಸಾಯದೆ ಪುಷ್ಟಿಯಾಗಿ ಬೆಳೆಯುತ್ತವೆ. ಬೇಗನೆ ಬೆಳೆಯುವ ಸಸ್ಬೇನಿಯಾ ಈಜಿಪ್ಟಿಕಾ ಬೀಜವನ್ನು ಎರಡು ಮಡಿಗಳ ನಡುವೆ ಬಿತ್ತಿದಲ್ಲಿ, ಅದು ಬೇಕಾದ ನೆರಳನ್ನೂ, ಸಾಕಷ್ಟು ಸೊಪ್ಪನ್ನೂ ಒದಗಿಸುತ್ತದೆ. ಬೀಜವನ್ನು ಉತ್ತರ-ದಕ್ಷಿಣ ಸಾಲುಗಳಲ್ಲಿ ಬಿತ್ತಿದಲ್ಲಿ ಯಾವಾಗಲೂ ಸಾಕಷ್ಟು ನೆರಳಿರುತ್ತದೆ.

ಸಸಿಗಳನ್ನು ಯಾವಾಗಲೂ ಚೆನ್ನಾಗಿ ಪರಿಶೀಲಿಸುತ್ತಿರಬೇಕು. ಇಲಿಗಳಿಂದಲೂ, ಗೆದ್ದಲುಗಳಿಂದಲೂ ಅವಕ್ಕೆ ಹೆಚ್ಚಿನ ಹಾನಿಯಾಗುತ್ತದೆ. ಇಲಿಗಳನ್ನು ಹಿಡಿಸಿ ಅಥವಾ ವಿಷವಿಕ್ಕಿ ಕೊಲ್ಲಬೇಕು. ಗೆದ್ದಲಿನ ಹಾವಳಿಯನ್ನು ಬಿ. ಎಚ್. ಸಿ. ಅಥವಾ ಡಿ.ಡಿ.ಟಿ. ಪುಡಿಯನ್ನು ಉಪಯೋಗಿಸುವುದರಿಂದಲೂ, ಆಲ್ಡ್ರಿನ್ ಅಥವಾ

ಹೆಪ್ಪೋಕ್ಲೋರ್ ದ್ರಾವಕದ ಬಳಕೆಯಿಂದಲೂ ತಡೆಗಟ್ಟಬಹುದು. ಕ್ಲೋರ್‌ಡೇನ್ ದ್ರಾವಣವೂ ಉಪಯುಕ್ತ.

ಕಾಯಿ ನೆಟ್ಟ ೧೧–೧೨ ವಾರಗಳಲ್ಲಿ ಮೊಳಕೆ ಪ್ರಾರಂಭವಾಗುತ್ತದೆ, ಮತ್ತು ೧೭–೧೮ ವಾರಗಳವರೆಗೂ ಬರುತ್ತಿರುತ್ತದೆ. ನೆಟ್ಟ ೬ ತಿಂಗಳಲ್ಲಿ ಮೊಳಕೆ ಬಾರದಿದ್ದಲ್ಲಿ ಅದನ್ನು ತೆಗೆದುಬಿಡಬೇಕು. ಬೇಗ ಮೊಳಕೆ ಹೊರಟು ಬುಡ ದಪ್ಪನಾಗಿ, ಹೆಚ್ಚಿನ ಎಲೆಗಳು ಬಂದಿದ್ದು, ಎಲೆಗಳು ಬೇಗ ಒಡೆಯುವ ಸಸಿಗಳು ನೆಡಲು ಉತ್ತಮವಾದದ್ದು. ಅಂಥಹ ಸಸಿಗಳು ಶೇ. ೧೦ರಷ್ಟು ಹೆಚ್ಚಿನ ಇಳುವರಿ ಕೊಡಬಲ್ಲವು. ಹೀಗೆ ಚುನಾಯಿಸಿದಲ್ಲಿ ಪಾತಿಯಲ್ಲಿನ ಶೇ. ೪೦–೫೦ ರಷ್ಟು ಸಸಿಗಳು ಮಾತ್ರ ಉಪಯುಕ್ತವಾಗಬಹುದಾದ್ದರಿಂದ ಅವಶ್ಯಕ ಎರಡರಷ್ಟು ಬೀಜವರಿಯನ್ನು ನೆಡಬೇಕು.

ಚುನಾಯಿಸಿದ ಸಸಿಗಳನ್ನು ಬೇರು ಕತ್ತರಿಸಿ ಕಾಯಿಯೊಡನೆ ಮೆಲ್ಲಗೆ ಎತ್ತಿಡಬೇಕು. ೭ರಿಂದ ೧೨ ತಿಂಗಳ ಸಸಿಗಳ ಬೇರು ಕತ್ತರಿಸುವುದು ಒಳ್ಳೆಯದು. ೧೨ ತಿಂಗಳ ನಂತರ ಕತ್ತರಿಸಿದಲ್ಲಿ ಸಸಿ ನಿಲ್ಲುವುದು ನಿಧಾನವಾಗುತ್ತದೆ. ತೆಗೆದ ಸಸಿಗಳನ್ನು ೧೦ ದಿನದೊಳಗೇ ನೆಡಬೇಕು. ೯ರಿಂದ ೧೮ ತಿಂಗಳೊಳಗಿನ ಸಸಿಗಳೇ ನೆಡಲು ಅನುಕೂಲವಾದವು. ೧೨ ತಿಂಗಳೊಳಗೇ ನೆಟ್ಟಲ್ಲಿ ಒಳ್ಳೆಯದು. ಆಗ ಇನ್ನೂ ಕಾಯಿಯಲ್ಲಿ ತಿರುಳಿದ್ದು, ಸಸಿ ಹೆಚ್ಚು ಬೇರು ಉತ್ಪನ್ನಮಾಡಲೂ, ಬೆಳೆಯಲೂ ಸಹಾಯಕವಾಗುತ್ತದೆ. ಅಲ್ಲದೆ ಎಳೆಯ ಸಸಿಗಳನ್ನು ಸ್ಥಳದಿಂದ ಸ್ಥಳಕ್ಕೆ ಸಾಗಿಸುವುದೂ ಸುಲಭ.

ತಂಜಾವೂರಿನಲ್ಲಿ "ಕಾಗೆಮೂಗೆಂದು" ಕರೆಯಲ್ಪಡುವ ಮೊಳಕೆ ಬಂದ ಬೀಜದ ಕಾಯನ್ನೇ ನೆಡುವ ವಾಡಿಕೆಯಿದೆ. ಇದರಿಂದ ಒಳ್ಳೆಯ ಸಸಿ ಚುನಾಯಿಸಲಾಗುವುದಿಲ್ಲ. ಮೈಸೂರಿನ ಹಲವೆಡೆ ೩–೫ ವರ್ಷದ 'ಗೆಪ್ಪೆ' ಸಸಿಗಳನ್ನು ನೆಡುತ್ತಾರೆ. ಇದನ್ನು ಸಾಗಿ

ಸಲೂ, ನೀರು ಹಾಯಿಸಲೂ ಹೆಚ್ಚಿನ ಖರ್ಚಾಗುವುದಲ್ಲದೆ, ಸರಿಯಾಗಿ ಬೆಳೆಯುವ ಸಸಿಗಳ ಸಂಖ್ಯೆ ಕಡಮೆ. ಆದ್ದರಿಂದ ಅದು ಅಷ್ಟೇನೂ ಸಮಂಜಸವಲ್ಲ. ಜೌಗು ಭೂಮಿಯಲ್ಲಿ ನೆಡಲು ಮಾತ್ರ ಈ ಸಸಿಗಳು ಸಹಾಯಕವಾಗುತ್ತವೆ. ಇತರ ಭೂಮಿಗಳಲ್ಲಿ ೯–೧೮ ತಿಂಗಳಿನ ಸಸಿಗಳೇ ನೆಡಲು ಉತ್ತಮ.

## ವಾಯುಗುಣ ಮತ್ತು ಭೂಗುಣ

ತೆಂಗು ವಿವಿಧ ಭೂ ಮತ್ತು ವಾಯುಗುಣಕ್ಕೆ ಸುಲಭವಾಗಿ ಹೊಂದಿಕೊಂಡು ಬೆಳೆಯಬಲ್ಲದಾದರೂ, ಇಳುವರಿಯ ದೃಷ್ಟಿಯಿಂದ ಅದಕ್ಕೆ ಬೇಕಾದ ಅನುಕೂಲತೆಗಳನ್ನು ಏರ್ಪಡಿಸಬೇಕಾದದ್ದು ಆವಶ್ಯಕ. ತೆಂಗು ಉಷ್ಣವಲಯದ ಬೆಳೆಯಾದ್ದರಿಂದ ಉಷ್ಣಾಂಶ ಅದಕ್ಕೆ ಅತ್ಯಗತ್ಯ.

ಉಷ್ಣವಲಯದಲ್ಲೇ ತೆಂಗಿನ ಬೆಳೆಯ ವಿಸ್ತರಣೆ ಅಧಿಕ. ಭಾರತ, ಸಿಲೋನ್, ಮಲಯಾ, ಇಂಡೋನೇಷ್ಯಾ ಮತ್ತು ಫಿಲಿಫ್ಫೈನ್ಸ್ ದ್ವೀಪಗಳಲ್ಲಿ ಪ್ರಪಂಚದ ಶೇ. ೯೦ ಭಾಗದ ಬೆಳೆ ಇದೆ. ಹೆಚ್ಚು ಉಷ್ಣಾಂಶವಿಲ್ಲದ ಸಮಶೀತೋಷ್ಣ ವಲಯಗಳಲ್ಲಿ ಮರ ಚೆನ್ನಾಗಿ ಬೆಳೆಯಬಹುದಾದರೂ ಫಲ ಕಡಮೆ.

ಉಷ್ಣವಲಯದಲ್ಲಿ ಸಮುದ್ರಮಟ್ಟದಿಂದ ಸುಮಾರು ೩,೦೦೦ ಅಡಿಗಳ ಎತ್ತರದವರೆಗೂ ಬೆಳೆಯಬಹುದು. ಸಮಶೀತೋಷ್ಣ ವಲಯದ ಕಡೆ ಹೋದಂತೆ ಸಮುದ್ರಮಟ್ಟಕ್ಕೆ ಹೆಚ್ಚಿನ ಎತ್ತರದಲ್ಲಿ ಅದು ಚೆನ್ನಾಗಿ ಬೆಳೆಯಲಾರದು. ಆಫ್ರಿಕಾದ ಟಾಂಗನೀಕಾದಲ್ಲಿ ಸುಮಾರು ೪೦೦೦ ಅಡಿ ಎತ್ತರದಲ್ಲಿ ಒಳ್ಳೆಯ ತೆಂಗಿನ ತೋಟ

ಗಳನ್ನು ಬೆಳೆಸಿದ್ದಾರೆ. ಆದರೆ ಅದು ಉಷ್ಣವಲಯದಲ್ಲಿದೆ. ಸಾಮಾನ್ಯವಾಗಿ ಸಮುದ್ರ ಮಟ್ಟಕ್ಕೆ ೩೦೦೦ ಅಡಿ ಎತ್ತರದ ಮೇಲಿನ ಪ್ರದೇಶದಲ್ಲಿ ಬೆಳೆದ ತೋಟ ಹೆಚ್ಚಿನ ಫಲದಾಯಕವಾಗುವುದಿಲ್ಲ.

ಮಳೆಯೂ ಬೆಳೆಯ ಮಿತಿಯನ್ನು ನಿರ್ಧರಿಸುತ್ತದೆ. ಸಕಾಲದಲ್ಲಿ ಬೀಳಬಹುದಾದಲ್ಲಿ ೨೫ ಅಂಗುಲ ಮಳೆಯೇ ಸಾಕಾದರೂ, ೭೫ ಅಂಗುಲದವರೆಗಿನ ಮಳೆ ಅದಕ್ಕೆ ಅನುಕೂಲ. ಸುಲಭವಾಗಿ ನೀರು ಬಸಿಯುವ ಮರಳು ಅಥವಾ ಜಂಬಿಟ್ಟಿಗೇ ಭೂಮಿಯಲ್ಲಿ ಮಳೆ ಎಷ್ಟೇ ಹೆಚ್ಚಾದರೂ ತೊಂದರೆಯಾಗುವುದಿಲ್ಲ. ಆದ್ದರಿಂದಲೇ ಕೇರಳ ಮತ್ತು ಕರಾವಳೀ ಪ್ರದೇಶದಲ್ಲಿ ತೆಂಗು ಚೆನ್ನಾಗಿ ಬೆಳೆಯುತ್ತದೆ. ತೆಂಗಿಗೆ ತಾಯಿಬೇರಿಲ್ಲದ್ದರಿಂದ ಬಹುಕಾಲ ನೀರಿಲ್ಲದೆ ಬದುಕಲಾರದು. ಹಾಗು ಜೌಗು ಭೂಮಿಯಲ್ಲೂ ಚೆನ್ನಾಗಿ ಬೆಳೆಯುಲಾರದು, ಮಳೆ ಕಡಮೆಯಾದರೂ, ಭೂಮಿಯಲ್ಲಿ ತೇವ ತಂಗುವ ಕಣಿವೆಗಳಲ್ಲಿ ಮತ್ತು ಕಟ್ಟೆಗಳ ಕೆಳಗೆ ಅವು ಚೆನ್ನಾಗಿ ಬೆಳೆಯುತ್ತವೆ. ಮಳೆಯಿಲ್ಲದಿದ್ದಲ್ಲಿ ಅವಕ್ಕೆ ಸಾಕಷ್ಟು ನೀರು ಹಾಯಿಸಬೇಕು. ಆದ್ದರಿಂದ, ಮಳೆ ಕಡಮೆಯಾದ ಪ್ರದೇಶದಲ್ಲಿ ಕೆರೆ ಅಥವಾ ಭಾವಿಯಿಂದ ಸಾಕಷ್ಟು ನೀರಿನ ಸೌಕರ್ಯವಿಲ್ಲದಿದ್ದಲ್ಲಿ ತೆಂಗನ್ನು ಬೆಳೆಯಬಾರದು.

ತೆಂಗಿಗೆ ಅತೀವ ಚಳಿ ಅಥವಾ ಉಷ್ಣ ಹೊಂದುವುದಿಲ್ಲ. ಸಾಮಾನ್ಯವಾಗಿ ೨೫ರಿಂದ ೩೨° ಸೆಂಟಿಗ್ರೇಡ್ ಉಷ್ಣಾಂಶವಿರುವ ಪ್ರದೇಶದಲ್ಲಿ ಫಲಪ್ರದವಾಗುವಂತೆ ಇತರ ಪ್ರದೇಶದಲ್ಲಿ ಆಗುವುದಿಲ್ಲ. ತೀವ್ರ ವ್ಯತ್ಯಾಸಗಳಾಗುವ ಹವಾಗುಣವುಳ್ಳ ಪ್ರದೇಶಕ್ಕಿಂತ ಒಂದೇ ರೀತಿಯ ವಾತಾವರಣವಿರುವ ಸ್ಥಳ ಅದಕ್ಕೆ ಅನುಕೂಲ. ಗಾಳಿಯಲ್ಲಿನ ತೇವಾಂಶ ಅದಕ್ಕೆ ಬೇಕಿದ್ದರೂ, ಅತಿ ಹೆಚ್ಚಾದಲ್ಲಿ ರೋಗ

ರುಜಿನಾದಿಗಳು ಬಹಳ ಹೆಚ್ಚಿ ತೊಂದರೆಯಾಗುತ್ತದೆ. ಬಹು ರಭಸದ ಸುಂಟರಗಾಳಿಯಿಂದ ಮರ ಮುರಿಯಬಹುದೇ ಹೊರತು, ಎಷ್ಟೇ ಹೆಚ್ಚಿನ ಗಾಳಿಯಿದ್ದರೂ ಮರಕ್ಕೆ ಬೇರಿನ್ನಾವ ತೊಂದರೆಯೂ ಆಗುವುದಿಲ್ಲ.

ತೆಂಗು ಹೆಚ್ಚಾಗಿ ಸಮುದ್ರ ತೀರಪ್ರದೇಶದಲ್ಲಿ ಸ್ವಾಭಾವಿಕವಾಗಿ ಬೆಳೆಯುವುದರಿಂದ ಸಮುದ್ರ ತೀರ ಅದರ ಬೆಳವಣಿಗೆಗೆ ಅನುಕೂಲ ವೆಂಬ ಭಾವನೆ ಅನೇಕರಲ್ಲಿ ಮೂಡಿಬಂದಿದೆ. ಆದರೆ ಆ ಅಭಿಪ್ರಾಯ ಸರಿಯಲ್ಲ. ಮೈಸೂರಿನ ಅರಸೀಕೆರೆ, ತಿಪಟೂರು ಮೊದಲಾದ ಕಡಮೆ ಮಳೆಯಾಗುವ ಸ್ಥಳಗಳಲ್ಲಿ, ತೀರ ಪ್ರದೇಶಕ್ಕಿಂತ ಉತ್ಕೃಷ್ಟ ಬೆಳೆ ಆಗುತ್ತಿದೆ. ಆದ್ದರಿಂದ ಸಮುದ್ರತೀರವೇ ಅದಕ್ಕೆ ಹೆಚ್ಚಿನ ಅನುಕೂಲವೆಂದಲ್ಲ. ಬಹುಶಃ ನೀರಿನಲ್ಲಿ ತೇಲಿಬಂದು ಹರಡಿ ತೀರ ಪ್ರದೇಶದಲ್ಲಿ ಹೆಚ್ಚಿನ ಮರ ಬೆಳೆದಿರಬಹುದಾಗಿದೆ. ಅಲ್ಲದೆ ತೀರ ಪ್ರದೇಶದ ತೇವ ಮತ್ತು ಉಷ್ಣಾಂಶ ಅದಕ್ಕೆ ಹಿತಕರವಾಗಿರುವು ದರಿಂದ ಅಲ್ಲಿ ಗಿಡ ಚೆನ್ನಾಗಿ ಬೆಳೆಯುತ್ತದೆ.

ಸಮುದ್ರತೀರದ ಭೂಗುಣ ತೆಂಗಿಗೆ ಹಿತಕರವಾಗಿ, ಬೆಳವಣಿಗೆಗೆ ಸಮರ್ಪಕವಾಗಿರುವುದರಿಂದ, ಅದೇ ಅನುಕೂಲತೆಗಳಿರುವೆಡೆಯೆಲ್ಲಾ ತೆಂಗು ಚೆನ್ನಾಗಿ ಬೆಳೆಯಬಲ್ಲುದು. ಉಷ್ಣವಲಯದ ಸಮುದ್ರ ತೀರಗಳಲ್ಲೂ, ದ್ವೀಪಗಳಲ್ಲೂ ಇತರ ಯಾವ ಬೆಳೆಯೂ ಇದರಷ್ಟು ಹೆಚ್ಚಾಗಿಲ್ಲ. ತೆಂಗಿಲ್ಲದ ದ್ವೀಪ ಅಥವಾ ತೀರಪ್ರದೇಶ ನೋಡಲು ಸಾಧ್ಯ. ಅದು ಅಚ್ಚ ಮರಳು ಭೂಮಿಯಿಂದ, ಜೇಡಿಮಣ್ಣಿನವರೆಗಿನ ಎಲ್ಲಾ ಅಂತರದ ಭೂಮಿಯಲ್ಲೂ ಚೆನ್ನಾಗಿ ಬೆಳೆಯಬಲ್ಲುದು. ಆದರೆ ಜೌಗು ಅಥವಾ ಕರಲು ಭೂಮಿಯಲ್ಲಿ, ಸಾಕಷ್ಟು ಕಡಗು ಗಳನ್ನು ಒದಗಿಸದಿದ್ದಲ್ಲಿ ಚೆನ್ನಾಗಿ ಬೆಳೆಯಲಾರದು.

ಅಡಕೆಗಿರುವಂತೆ, ತೆಂಗಿನ ಬಿತ್ತನೆಯ ಆಯ್ಕೆಗೆ ವಾಯುಗುಣ ಭೂಗುಣದ ಭೇದವಿಲ್ಲ. ಕರಾವಳಿಯ ಬಿತ್ತನೆ ಮೈದಾನ ಪ್ರದೇಶ ದಲ್ಲೂ, ಒಳ್ಳೆಯ ಅನುಕೂಲತೆಗಳನ್ನು ಒದಗಿಸಿದಲ್ಲಿ ಬೆಳೆಯುತ್ತದೆ. ಸಮುದ್ರತೀರದ ಮರಳು ಭೂಮಿಯಲ್ಲಿ ಬೆಳೆಯುವಂತೆಯೇ, ಒಳ ನಾಡಿನ ಮೆಕ್ಕಲು ಭೂಮಿಯಲ್ಲಿಯೂ, ಮೈದಾನದ ಜಂಬಿಟ್ಟಿಗೆ, ಕೆಂಪು ಮತ್ತು ಜೇಡಿ ಮಣ್ಣುಗಳಲ್ಲಿಯೂ, ಕೊನೆಗೆ ಗದ್ದೆಯ ಬದು ಗಳಲ್ಲೂ ಸೊಂಪಾಗಿ ಬೆಳೆಯಬಲ್ಲುದು. ಕಲ್ಲುಭೂಮಿಯಲ್ಲಿಯೂ ಒಳ್ಳೆಯ ಗೊಬ್ಬರ ಒದಗಿಸಿದಲ್ಲಿ ಚೆನ್ನಾಗಿ ಬೆಳೆದು ಫಲ ನೀಡು ತ್ತದೆ.

ತೆಂಗು ಬೆಳೆಯುತ್ತಿರುವ ಭಾರತದ ಪ್ರದೇಶಗಳನ್ನು ಐದು ಮುಖ್ಯ ವಿಧದವುಗಳಾಗಿ ವಿಂಗಡಿಸಬಹುದು. ಸಮುದ್ರ ತೀರದ ಮರಳುಪ್ರದೇಶ, ಮೆಕ್ಕಲು ಮಣ್ಣಿನ ಒಳನೀರು ಪ್ರದೇಶ, ಫಲ ವತ್ತಾದ ಕರಾವಳಿಯ ಕಣಿವೆ ಪ್ರದೇಶ, ಜಂಬಿಟ್ಟಿಗೆ ಮತ್ತು ಕಲ್ಲು ಮಿಶ್ರಣದ ಪಶ್ಚಿಮ ಘಟ್ಟಗಳ ಇಳಿಜಾರು ಮತ್ತು ಫಲವತ್ತಾದ ಮೈಸೂರಿನ ಕೆಂಪುಭೂಮಿ. ಸಾಮಾನ್ಯವಾಗಿ ಓರಷ್ಟು ಕ್ಷಾರಾಂಶ ವುಳ್ಳ ಎಲ್ಲಾ ಭೂಮಿಗಳಲ್ಲೂ ಅದರ ಬೆಳವಣಿಗೆ ಸಮಂಜಸವಾಗಿರು ತ್ತದೆ.

ಅದರ ಬೇರುಗಳು ಅಡ್ಡವಾಗಿ ಬೆಳೆಯುವುದರಿಂದ ಭೂಮಿ ಹದ ವಾಗಿದ್ದಷ್ಟೂ ಬೇರುಗಳು ಚೆನ್ನಾಗಿ ಬೆಳೆಯಲು ಅನುಕೂಲ. ಜೌಗು ಮಾತ್ರ ಆಗದಂತೆ ನೀರು ಬಸಿಯುವ ಭೂಮಿಯಾಗಬೇಕು. ಜೌಗಿದ್ದಲ್ಲಿ ಬೇರು ಹೆಚ್ಚಾಗಿ ಬೆಳೆಯದೆ ಗಿಡ ಚೆನ್ನಾಗುವುದಿಲ್ಲ. ಕನಿಷ್ಠಪಕ್ಷ ೩-೪ ಅಡಿಗಳಷ್ಟು ಫಲವತ್ತಾದ ಮಣ್ಣಿರಬೇಕು. ಅದಕ್ಕಿಂತ ಕಡಮೆ ಆಳದಲ್ಲಿ ಕಲ್ಲುಬಂಡೆ ಅಥವಾ ಗಟ್ಟಿಜೇಡಿ

ಇದ್ದಲ್ಲಿ ಗಿಡ ಚೆನ್ನಾಗಿ ಬೆಳೆಯಲಾರದು. ಮರದ ಫಲ ಭೂಮಿಯ ಸಾರವನ್ನವಲಂಬಿಸಿದೆ. ಭೂಮಿ ಫಲವತ್ತಾಗಿದ್ದಷ್ಟೂ ಫಲ ಹೆಚ್ಚು.

ಆದ್ದರಿಂದ, ತೋಟ ಪ್ರಾರಂಭಿಸುವ ಮೊದಲು ಸರಿಯಾದ ಸ್ಥಳದ ಆಯ್ಕೆ ಬಹು ಮುಖ್ಯ. ಅನುಕೂಲವಿರುವ ಸ್ಥಳದಲ್ಲಿ ಬೆಳೆ ಚೆನ್ನಾಗಿ ಬರುತ್ತದೆ. ಹಿಂದೆ ತೆಂಗು ನೆಟ್ಟು ಚೆನ್ನಾಗಿ ಬರದಿದ್ದ ಸ್ಥಳದಲ್ಲಿ ಪುನಃ ನೆಡಬಾರದು. ಕರಲು ಭೂಮಿ ಮತ್ತು ಜೌಗು ಪ್ರದೇಶಗಳಲ್ಲಿ ನೀರು ಪೂರ್ಣ ಬಸಿಯುವಂತೆ ಏರ್ಪಾಡಾಗಬೇಕು. ಮಳೆಯ ಅಥವಾ ನೀರಿನ ಸೌಲಭ್ಯವಿರಲೇಬೇಕು. ಒಂದೆರಡಡಿ ಯಲ್ಲೆ ಬಂಡೆ ಅಥವಾ ಜೇಡಿಯಿರುವ ಭೂಮಿ ಅದರ ಬೆಳವಣಿಗೆಗೆ ಅನುಕೂಲವಲ್ಲ.

## ತೋಟ ನೆಡುವಿಕೆ

ಸಸಿ ನೆಡುವುದಕ್ಕೆ ಮುನ್ನ ಚುನಾಯಿತ ಜಮೀನು ಸಾಧ್ಯ ವಾದಷ್ಟು ಸಮನಾಗಿರುವಂತೆ ಏರ್ಪಡಿಸಬೇಕು. ಬಹಳ ಇಳಿ ಜಾರಾಗಿದ್ದಲ್ಲಿ ಅದನ್ನು ಮೆಟ್ಟಲು ಮೆಟ್ಟಲಾಗಿ ಸಮಪಡಿಸಿ ಬದು ಹಾಕಬೇಕು. ತಗ್ಗು ಭೂಮಿಯಾದಲ್ಲಿ ನೀರು ತಂಗದಂತೆ ಸಾಕಷ್ಟು ಕಡಗುಗಳನ್ನು ಮೊದಲೇ ತೋಡಿ ತೆಗೆಯಬೇಕು. ಕೇರಳದ ಕೆಲವೆಡೆ ಯಾವಾಗಲೂ ಜೌಗಾಗಿ ನೀರು ನಿಲ್ಲುವಂತ ಸಮುದ್ರ ತೀರಪ್ರದೇಶ ಗಳಲ್ಲಿ ೧೫–೨೦ ಅಡಿ ಎತ್ತರ ಬದುಗಳನ್ನು ಕೃತಕವಾಗಿ ಏರ್ಪಡಿಸಿ ಅದರ ಮೇಲೆ ಸಸಿಗಳನ್ನು ಸಾಲಾಗಿ ನೆಡುತ್ತಾರೆ. ಈ ಬದುಗಳು ಕರಗದಂತೆ ಕಲ್ಲಿನ ಕಟ್ಟಡವನ್ನು ಇಬ್ಬದಿಯಲ್ಲೂ ಕಟ್ಟಿ, ಮಧ್ಯೆ

ಮರಳು, ಮಣ್ಣು ಪದರ ಪದರವಾಗಿ ತುಂಬುವುದರಿಂದ ಸಸಿಗಳ
ಚೆನ್ನಾಗಿ ಬೆಳೆಯುತ್ತವೆ.

ತೋಟಕ್ಕೆ ಒಳ್ಳೆಯ ಬೇಲಿಯನ್ನು ಏರ್ಪಡಿಸಬೇಕು. ದನ
ಆಡುಗಳು ನೆಟ್ಟ ಸಸಿಗಳ ಗರಿಗಳನ್ನು ಮೇಯದಂತೆ ನೆಡುವುದಕ್ಕೆ
ಮೊದಲೇ ಬೇಲಿ ಏರ್ಪಡಿಸಬೇಕು. ಸಾಮಾನ್ಯವಾಗಿ ಈಗ
ಕತ್ತಾಳೆಯ ಬೇಲಿಯನ್ನು ಸುತ್ತಲೂ ನೆಡುವುದುಂಟು. ಅರಸೀಕೆರೆಯ
ಬಳಿ ೪ ಅಡಿ ಎತ್ತರದ ಕಲ್ಲಿನ ಅಥವಾ ಮಣ್ಣಿನಗೋಡೆ ಏರ್ಪಡಿಸು
ತ್ತಾರೆ. ಇವೆಲ್ಲಕ್ಕಿಂತ ಬೇಗ ಬೆಳೆಯುವ ಮುಳ್ಳು, ಮತ್ತಿತರ ಗಿಡ
ಗಳನ್ನು ಬೇಲಿಗಾಗಿ ನೆಡುವುದು ಉತ್ತಮ. ಪ್ರೋಸಾಪಿಸ್
ಜ್ಯೂಲಿಫ್ಲೋರಾ ಎಂಬ ಬಳ್ಳಾರಿ ಜಾಲಿ, ಅಥವಾ ಸೀಮೆಹುಣಿಸೆ
ಒಳ್ಳೆಯ ಬೇಲಿಯಾಗುತ್ತದೆ. ಇದರ ಒಳಗಡೆ ಒಂದು ಸಾಲು
ಗ್ಲಿರಿಸಿಡಿಯಾ ಬೆಳೆದಲ್ಲಿ ತೋಟಕ್ಕೆ ಬೇಕಾದ ಸೊಪ್ಪನ್ನು ಅದು
ಒದಗಿಸುತ್ತದೆ.

ತೀರಪ್ರದೇಶದಲ್ಲೂ ಮತ್ತು ಸಣ್ಣ ಸಣ್ಣ ತೋಟಗಳಲ್ಲಿ ಸರಿಯಾದ
ಅಂತರವಿಲ್ಲದೆ ಸಸಿಗಳನ್ನು ಹೆಚ್ಚಾಗಿ ಮನಸೋ ಇಚ್ಛೆ ನೆಡುತ್ತಾರೆ.
ಇದರಿಂದ ಇಳುವರಿ ಹೆಚ್ಚುವುದೆಂದು ನಂಬಿಕೆ. ಆದರೆ ಅದು ಸರಿ
ಯಲ್ಲ. ಸಮಾನಾಂತರವಾಗಿ ಸಾಕಷ್ಟು ಮಾತ್ರ ನೆಟ್ಟಲ್ಲಿ ಇಳುವರಿ
ಹೆಚ್ಚುತ್ತದೆ. ರೈತರು ಹೆಚ್ಚಾಗಿ ಸಸಿ ನೆಡುವುದು ತೋಟದ ಬೆಲೆ
ಹೆಚ್ಚಲೆಂದು. ಯಾಕೆಂದರೆ ತೋಟದ ಬೆಲೆ ವಿಸ್ತೀರ್ಣವನ್ನನುಸರಿ
ಸದೆ, ಮರಗಳ ಸಂಖ್ಯೆಯನ್ನವಲಂಬಿಸಿದೆ. ಇದರಿಂದ ಇಳುವರಿ
ಬಹಳ ಕಡಮೆಯಾಗುತ್ತದೆ.

ತೋಟಗಳಲ್ಲಿ ಸಸಿಯಿಂದ ಸಸಿಗೆ ೧೮ರಿಂದ ೩೩ ಅಡಿ ಅಂತರ
ಕಂಡುಬರುತ್ತದೆ. ಸಿಂಹಳದಲ್ಲಿ ೯ ಅಡಿಯಿಂದ ೫೦ ಅಡಿ ಅಂತರ
ಕೊಟ್ಟು ತಮ್ಮ ಅನುಕೂಲಕ್ಕೆ ತಕ್ಕಂತೆ ನೆಡುತ್ತಾರೆ. ಆದರೆ ಈಗ

೨೫ ಅಡಿ ಅಂತರ ಹೆಚ್ಚಾಗಿ ಕಂಡುಬರುತ್ತಿದೆ. ಭಾರತದಲ್ಲೂ ಸಸಿ ಅಂತರದಲ್ಲಿ ಹೆಚ್ಚಿನ ವ್ಯತ್ಯಾಸಗಳಿವೆ. ಸಾಮಾನ್ಯವಾಗಿ ೩೦ ಅಡಿಗೆ ಮೀರದಂತೆ ಅಂತರ ಕೊಡುತ್ತಾರೆ.

ಯಾವೊಂದು ಬೆಳೆಗೂ ಭೂಗುಣವನ್ನನುಸರಿಸಿ ಅದರ ಬೆಳವಣಿಗೆಗೆ ಸಾಕಷ್ಟು ಅಂತರ ಕೊಡಬೇಕು. ಅಂತರ ಬಹು ಹೆಚ್ಚಾದಲ್ಲಿ ಸಾಂದ್ರತೆ ಕಡಮೆಯಾಗಿ ನಷ್ಟವಾಗುತ್ತದೆ. ಅಂತರ ಕಡಮೆಯಾದಲ್ಲಿ ಸಾಂದ್ರತೆ ಹೆಚ್ಚಿ ಬೇರು ಬೆಳೆಯಲು ಸ್ಥಳ ಸಾಲದೆ ಇಳುವರಿ ಕಡಮೆಯಾಗುತ್ತದೆ. ಆದ್ದರಿಂದ ಭೂಗುಣಕ್ಕನುಗುಣವಾಗಿ ಬೆಳೆಗೆ ಬೇಕಾದ ಅಂತರ ನಿರ್ಧರಿಸಬೇಕು. ಅತಿ ಫಲವತ್ತಾದ ಆಳಮಣ್ಣಿನ ಉತ್ಕೃಷ್ಟ ಭೂಮಿಯಲ್ಲಿ ಅಂತರ ಕಡಮೆಯಾಗಬೇಕು. ಮರಳು ಮತ್ತು ಕಲ್ಲು ಭೂಮಿಗಳಲ್ಲಿ ಅಂತರ ಹೆಚ್ಚಬೇಕು. ಮಳೆ ಕಡಮೆಯಾದ ಸ್ಥಳಗಳಲ್ಲಿ ಎಲ್ಲಾ ಭೂಮಿಗಳಲ್ಲೂ ಅಂತರ ಕಡಮೆ ಇದ್ದಲ್ಲಿ ಭೂಮಿಯಲ್ಲಿನ ತೇವ ಬೇಗ ಆರದೆ ಅನುಕೂಲವಾಗುತ್ತದೆ. ಸಾಧಾರಣವಾಗಿ ೨೫ರಿಂದ ೩೩ ಅಡಿ ಅಂತರವಿಟ್ಟು ಸಸಿ ನೆಡುವುದು ಉತ್ತಮ. ಮೈಸೂರಿನ ಬಹು ಭಾಗದ ಭೂಮಿಗೆ ೩೩ ಅಡಿ ಅಂತರ, ಅಂದರೆ ಎಕರೆಗೆ ೪೦ ಸಸಿ ನೆಡುವುದು ಅನುಕೂಲವೆಂದು ಕಂಡುಬಂದಿದೆ.

ನೆಡುವಾಗ ಎರಡು ವಿಧದ ಪದ್ಧತಿಗಳು ಅನುಸರಿಸಲ್ಪಡುತ್ತಿವೆ. ಚದರ ಮತ್ತು ತ್ರಿಕೋಣ ಪದ್ಧತಿಗಳೇ ಅವು. ಚದರ ಪದ್ಧತಿಯಲ್ಲಿ ಗಿಡದಿಂದ ಗಿಡಕ್ಕೆ ಸಮಾನಾಂತರವಿದೆ. ತ್ರಿಕೋಣ ಪದ್ಧತಿಯಲ್ಲಿ ಅಂತರ ವ್ಯತ್ಯಾಸವಿದ್ದು ಮೊದಲಿನದಕ್ಕಿಂತ ಶೇ. ೧೫ರಷ್ಟು ಸಸಿಗಳು ಹೆಚ್ಚಾಗಿರುತ್ತವೆ. ಈ ಎರಡರಲ್ಲಿ ಯಾವುದನ್ನಾದರೂ ಅನುಸರಿಸಬಹುದು.

ಗುಂಡಿಗಳನ್ನು ಭೂಗಣಕ್ಕನುಕೂಲಿಸುವಂತೆ ತೆಗೆಯಬೇಕ
ಜೇಡಿ ಮುಂತಾದ ಗಟ್ಟಿ ಭೂಮಿಯಲ್ಲಿ ೪ ಅಡಿ ಉದ್ದ, ೪ ಅ
ಅಗಲ ಮತ್ತು ೪ ಅಡಿ ಆಳದ ಗುಂಡಿಗಳನ್ನು ತೆಗೆಯಬೇಕ
ಸಾಧಾರಣ ಭೂಮಿಯಲ್ಲಿ ಈ ಅಳತೆ ೩ ಅಡಿಯಾದರೆ ಸಾಕ
ಬಹಳ ಗಟ್ಟಿಯಾದ ಕಲ್ಲುಭೂಮಿಯಲ್ಲಿ ಈ ಗುಂಡಿಯ ನಾಲ
ಕಡೆಗೂ ಉದ್ದನೆಯ ಕಡಗುಗಳನ್ನು ತೆಗೆದು ಮುಚ್ಚಿದರೆ ಬೇರ
ಬೆಳೆಯಲು ಸಹಾಯಕವಾಗುತ್ತದೆ. ಮರಳು ಭೂಮಿಯಲ್ಲಿ ೧ ೧/
–೨ ಅಡಿಯಾದರೆ ಸಾಕು. ಸಸಿ ನೆಡುವ ೨–೩ ತಿಂಗಳ ಮುಂಚೆಯೆ
ಗುಂಡಿಗಳನ್ನು ತೆಗೆದು ಚೆನ್ನಾಗಿ ಒಣಗಿಸಬೇಕು. ಅವುಗಳಲ್ಲಿ
ಒಂದೆರಡು ಸಲ ಕಸಕಡ್ಡಿಗಳನ್ನು ತುಂಬಿ ಸುಡುವುದು ಒಳ್ಳೆಯದು
ಜಂಬಿಟ್ಟಿಗೆಯ ಮಣ್ಣಾಗಿದ್ದು ಗಟ್ಟಿಯಾಗಿದ್ದಲ್ಲಿ ಎರಡು ಹಿಡಿ
ಉಪ್ಪು ಸೇರಿಸಿದಲ್ಲಿ ಅದು ಮೃದುವಾಗುತ್ತದೆ.

ಗುಂಡಿಯಲ್ಲಿ ನೆಡುವ ಆಳದಲ್ಲೂ ವ್ಯತ್ಯಾಸವಿದೆ. ಸಿಂಹಳ
ಮಲಯಾ ದೇಶಗಳಲ್ಲಿ ಸಸಿಗಳನ್ನು ಭೂಮಟ್ಟದಿಂದ ಸ್ವಲ್ಪ ಕೆಳಗ
ನೆಡುತ್ತಾರೆ. ಭಾರತದಲ್ಲಿ ಸಾಧಾರಣವಾಗಿ ೧ ೧/೨–೨ ಅಡಿ ಆಳ
ದಲ್ಲಿ ನೆಡುವುದು ವಾಡಿಕೆಯಲ್ಲಿದೆ. ಮಳೆ ಕಡಮೆಯು, ನೀರು
ಸಾಕಾಗದ ಸ್ಥಳಗಳಲ್ಲಿ ಆಳವಾಗಿ ನೆಡುವುದೇ ಉತ್ತಮ. ಜೌಗು
ಪ್ರದೇಶದಲ್ಲಿ ಮಾತ್ರ ಭೂಮಟ್ಟಕ್ಕೇ ನೆಟ್ಟು, ಮೇಲೆ ೨ ಅಡಿಯಷ್ಟು
ಮಣ್ಣು ಕಟ್ಟೆ ಬದುಹಾಕುವುದು ಉತ್ತಮ.

ಸಸಿಗಳನ್ನು ನೆಡುವ ಮುಂಚೆ ಗುಂಡಿಯ ತಳವನ್ನು ಅಗೆದು
ಸಡಲಿಸಿ, ಮೇಲ್ಮಣ್ಣು, ಮರಳು ಮತ್ತು ಬೂದಿ ಸೇರಿಸಿ ಒಂದೂವರೆ
ಅಡಿಯಷ್ಟಕ್ಕೆ ತುಂಬಬೇಕು. ಅದರ ಮಧ್ಯೆ ಗುಳಿ ಮಾಡಿ ಸಸಿ
ಯನ್ನು ನೇರವಾಗಿಟ್ಟು ನೆಟ್ಟು ಸುತ್ತಲೂ ಮಣ್ಣನ್ನು ಗಟ್ಟಿಯಾಗು
ವಂತೆ ತುಳಿದು ಅದುಮಬೇಕು. ಇದರಿಂದ ಸಸಿ ಭದ್ರವಾಗಿದ್ದು

ಬೇಗ ಬೇರು ಕೊಡಲು ಅನುಕೂಲವಾಗುತ್ತದೆ ಗಾಳಿ ಹೆಚ್ಚಾದ ಸ್ಥಳಗಳಲ್ಲಿ ಸಸಿಗಳು ಅಲ್ಲಾಡದಂತೆ ಸರಿಯಾದ ಆಸರೆ ಕೊಡಬೇಕು. ನಮ್ಮಲ್ಲಿ ೩ ವರ್ಷದ 'ಗೆಪ್ಪಿ' ಸಸಿಗಳನ್ನು ನೆಡುವಾಗ, ಈಚಲ ಮರದ ೫–೬ ಅಡಿ ಉದ್ದದ ತುಂಡುಗಳನ್ನು ನೆಟ್ಟು ಆಸರೆ ಏರ್ಪಡಿಸುತ್ತಾರೆ. ಇದರಿಂದ ಆಸರೆ ಮಾತ್ರವಲ್ಲದೆ ಮುಂದೆ ಅದು ಕೊಳೆತಾಗ ಗೊಬ್ಬರವೂ ಒದಗುತ್ತದೆ. ಎಳೆಯ ಸಸಿಗಳಿಗೆ ಡಾಮ್ರ ಬಳಿದ ಬಿದಿರು ತುಂಡುಗಳನ್ನು ನೆಟ್ಟು ಆಸರೆ ಕೊಡಬಹುದು.

ಸಸಿಗಳನ್ನು ಮುಂಗಾರು ಮಳೆಗೆ ಮುಂಚೆ ನೆಡುವುದೇ ಉತ್ತಮ. ಅರಸೀಕೆರೆ–ತಿಪಟೂರು ಪ್ರದೇಶಗಳಲ್ಲಿ ಸಸಿಗಳನ್ನು ಶಿವರಾತ್ರಿನಂತರ ನೆಟ್ಟು ನೀರು ಎರೆಯುತ್ತಾರೆ. ಭೂಮಿಯಲ್ಲಿನ ಶಾಖ, ತೇವಗಳಿಂದ ಹೊಸ ಬೇರು ಬಹು ಬೇಗ ಬರುತ್ತದೆ. ಆದರೆ ನೀರು ಹಾಕಲು ಹೆಚ್ಚಿನ ಖರ್ಚಾಗುವುದರಿಂದ, ಭರಣಿ ಮಳೆಯನಂತರ ನೆಡುವುದು ಅನುಕೂಲ. ಸಸಿಗಳನ್ನು ಮಳೆಗಾಲದಲ್ಲಿ ನೆಡಬಾರದು. ಅದರಿಂದ ಬೇರು ಬೇಗ ಬೆಳೆಯದೆ ಸಸಿಗಳು ಸಾಯಬಹುದು. ಮಳೆಗಾಲಕ್ಕೆ ಮುಂಚೆ ಅಥವಾ ನಂತರ ನೆಡಬೇಕು.

ಸಸಿಗಳ ಬೆಳವಣಿಗೆ ಸಕಾಲದ ಬೇಸಾಯ ಮತ್ತು ಸರಿಯಾದ ನೀರಿನ ಸೌಲಭ್ಯವನ್ನನುಸರಿಸುತ್ತದೆ. ಎಳೇ ಸಸಿಗಳಿಗೆ ಸಾಕಷ್ಟು ಆರೈಕೆ ಅಗತ್ಯ. ಅವನ್ನು ದನ, ಆಡುಗಳು ಮೇಯದಂತೆ, ಗೆದ್ದಲು ತಿನ್ನದಂತೆ, ಕಳೆ ಹೆಚ್ಚಾಗದಂತೆ ಕಾಪಾಡಬೇಕು. ಸಾಕಷ್ಟು ಗೊಬ್ಬರ, ನೀರು ಒದಗಿಸಬೇಕು. ಮಳೆ ಇಲ್ಲದಿದ್ದಲ್ಲಿ ಸಸಿಗಳು ಬೇರು ಕೊಡುವವರೆಗೂ ವಾರಕ್ಕೆ ೨–೩ ಸಲ ನೀರು ಕೊಡುತ್ತಿರಬೇಕು. ನೆಟ್ಟ ೨–೩ ವರ್ಷದವರೆಗೂ ಸಸಿಗಳಿಗೆ ಬೇಸಗೆಯಲ್ಲಿ ನೀರು ಕೊಡಲೇಬೇಕು.

ಎಳೆ ಸಸಿಗಳಿಗೆ ಬೇಸಗೆಯಲ್ಲಿ ೨–೩ ವರ್ಷಗಳವರೆಗೂ ನೆರ
ಒದಗಿಸುವುದು ಒಳ್ಳೆಯದು. ಬೇಗ ಬೆಳೆಯುವ ಸೆಸ್ಬೇನಿಯಾ ಬೀ
ವನ್ನು ಬಿತ್ತಿ ಅಥವಾ ಬೇರೆ ತೋಟದಲ್ಲಿ ಬಿದ್ದ ತೆಂಗಿನ ಎಲೆಗಳನ
ನೆಟ್ಟು ಮರಚು ಮಾಡಬೇಕು. ಇದರಿಂದ ಸಸಿಗಳು ಒಣಗದ
ಕೆಲವು ರೋಗಗಳೂ ಬಾರದಂತಾಗುತ್ತದೆ.

## ಮಧ್ಯಮ ಬೇಸಾಯ ಮತ್ತು ಗೊಬ್ಬರ ಪೂರೈಕೆ

ಆಗ್ಗಾಗ್ಗೆ ಸಸಿಗಳ ಸುತ್ತಲೂ ಕೆದಕಿ ಕಳೆ ತೆಗೆಯುತ್ತಿರಬೇಕು.
ಮಳೆಗಾಲದಲ್ಲಿ ಗುಂಡಿಗಳಲ್ಲಿ ನೀರು ನಿಲ್ಲದಂತೆ ನೋಡಿಕೊಳ್ಳಬೇಕು.
ಮಳೆ ನಿಂತಮೇಲೆ, ಕೊಚ್ಚಿಬಂದ ಮಣ್ಣು ಸಸಿಗಳ ತುದಿಯನ್ನು
ಮುಚ್ಚಿದ್ದಲ್ಲಿ ಅದನ್ನು ತೆಗೆದು ಸಸಿ ಬೆಳೆಯಲು ಅನುಕೂಲಮಾಡಿ
ಕೊಡಬೇಕು. ಸಸಿಗಳ ಮಧ್ಯೆ ಕಳೆಯಿಲ್ಲದಂತೆ ಉಳುಮೆಮಾಡಿ
ಬಿಡಬೇಕು. ಉಪಬೆಳೆಗಳಿಲ್ಲದಿದ್ದಲ್ಲಿ ಚೆನ್ನಾಗಿ ಹಬ್ಬುವ ಹಸಿರೆಲೆ
ಗೊಬ್ಬರದ ಗಿಡವನ್ನು ಬೆಳಸಿದಲ್ಲಿ ಅದು ಪೂರ್ಣ ಹರಡಿ ಭೂಮಿ
ಯಲ್ಲಿನ ತೇವವನ್ನು ಉಳಿಸಲೂ, ಕಳೆಬಾರದಿರಲೂ ಸಹಕಾರಿ
ಯಾಗುತ್ತದೆ. ಇದಕ್ಕಾಗಿ ಹಲಸಂದೆ, ಕಲಪಗೋನಿಯಾ
ಸೆಂಟ್ರೋಸೀಮಾ ಮೊದಲಾದುವು ಉತ್ತಮ. ಆದರೆ ಅವು ಹೆಚ್ಚಾಗಿ
ಸಸಿಗಳನ್ನು ಸುತ್ತುಗಟ್ಟಿ ಅವಕ್ಕೆ ತೊಂದರೆ ಮಾಡದಂತೆ ನೋಡಿ
ಕೊಳ್ಳಬೇಕು.

ಪಸಲು ಕೊಡುವ ತೋಟಗಳಲ್ಲೂ ಮಧ್ಯಮ ಬೇಸಾಯ ಬಹು
ಮುಖ್ಯ. ಬರೀ ಬೇಸಾಯದಿಂದಲೇ ಶೇ. ೧೧೦ರಷ್ಟು ಉತ್ಪತ್ತಿ
ಹೆಚ್ಚಿರುವುದು ತಿಳಿದುಬಂದಿದೆ. ತೋಟವನ್ನು ವರ್ಷಕ್ಕೆ ಒಂದೆರಡಾ

ವರ್ತಿ ಉತ್ತು ಬಿಡುವುದರಿಂದಾಗಲೀ, ಅಗತೆಮಾಡುವುದರಿಂದಾಗಲೀ, ಭೂಮಿಯಲ್ಲಿ ಬೇರು ಚೆನ್ನಾಗಿ ಬೆಳೆಯಲೂ, ಗಾಳಿಯಾಡಲೂ ಅನುಕೂಲವಾಗುತ್ತದೆ. ಇದರಿಂದ ಕಳೆಗಳು ನಾಶವಾಗಿ ಫಸಲು ಹೆಚ್ಚುತ್ತದೆ. ಭರಣಿ ಮಳೆಯ ನಂತರ ಒಮ್ಮೆ ಕಬ್ಬಿಣದ ನೇಗಿಲಿನಿಂದ ಉತ್ತು, ಸೆಣಬು ಮುಂತಾದ ಹಸಿರೆಲೆ ಗೊಬ್ಬರದ ಬೀಜ ಬಿತ್ತಬೇಕು. ಆ ಸಮಯದಲ್ಲೇ ಸಾಧ್ಯವಾದಲ್ಲಿ ಗಿಡ ಒಂದಕ್ಕೆ ೧೦೦ ಪೌಂಡಿನಷ್ಟು ದನದ ಅಥವಾ ಹಟ್ಟಿಯ ಗೊಬ್ಬರವನ್ನು ಜಮೀನಿಗೆ ಹರಡಿ ಉತ್ತು ಸೇರಿಸಬೇಕು. ಸಾಧ್ಯವಾದಲ್ಲಿ ಡಿಸೆಂಬರ್ ತಿಂಗಳ ವೇಳೆಗೆ ಕಲ್ಟಿವೇಟರ್ ಹೊಡೆದು ಮೇಲ್ಮಣ್ಣು ಪುಡಿಯಾಗಿರುವಂತೆ ಏರ್ಪಡಿಸಬೇಕು.

ದನದ ಅಥವಾ ಹಟ್ಟಿಯ ಗೊಬ್ಬರ, ಕುರಿಗೊಬ್ಬರ, ಬೂದಿ, ಹಸಿರೆಲೆ ಗೊಬ್ಬರಗಳನ್ನು ನಮ್ಮ ರೈತರು ಬಳಸುವುದು ವಾಡಿಕೆಯಲ್ಲಿದೆ. ಕೆಲವೆಡೆ ಕುರಿ ರೊಪ್ಪಗಳನ್ನು ತೆಂಗಿನ ತೋಟದಲ್ಲಿ ಕಟ್ಟಿ ಗೊಬ್ಬರ ಒದಗಿಸುತ್ತಾರೆ, ಆದರೆ ಇತ್ತೀಚೆಗೆ ತೋಟಗಳು ಹೆಚ್ಚುತ್ತಿದ್ದು, ಸಾಕಷ್ಟು ಗೊಬ್ಬರ ಉತ್ಪತ್ತಿಯಾಗದೆ, ಗಿಡಗಳಿಗೆ ಸಾಕಷ್ಟು ಸಿಗುತ್ತಿಲ್ಲ. ಆದ್ದರಿಂದ ಇದರ ಜೊತೆಗೆ ಕೃತಕ ಗೊಬ್ಬರವನ್ನೂ ಕೊಡುವುದು ಉತ್ತಮ. ಸಸಿಗಳಿಗೂ, ಮರಗಳಿಗೂ ಕೊಡಬೇಕಾದ ಕೃತಕ ಗೊಬ್ಬರಗಳ ಪ್ರಮಾಣವನ್ನು ಈ ಕೆಳಗೆ ಸೂಚಿಸಲಾಗಿದೆ.

ಅಮೋನಿಯಂ ಸಲ್ಫೇಟಿಗೆ ಬದಲು ಹಿಂಡಿಯನ್ನು ಪ್ರತಿ ಒಂದು ಕಿಲೋಗ್ರಾಂ ಅಮೋನಿಯಂ ಸಲ್ಫೇಟಿಗೆ ೩–೪ ಕಿಲೋ ಹಿಂಡಿಯಂತೆ ಕೊಡಬಹುದು. ಮ್ಯೂರಿಯೇಟ್ ಆಫ್ ಪೊಟ್ಯಾಷ್ ಸಿಗದಿದ್ದಲ್ಲಿ ೧೫–೨೦ ಕಿಲೋ ಬೂದಿಯನ್ನು (ಕಟ್ಟಿಗೆ, ಹೊಟ್ಟು ಮೊದಲಾದವುಗಳ ಬೂದಿ) ಕೊಡಬಹುದು.

| | ಪ್ರತಿ ಸಸಿಗೂ ಕೊಡಬೇಕಾದ ಕಿ.ಗ್ರಾಂ ಪ್ರಮಾಣ | | |
|---|---|---|---|
| | ಅಮೋನಿಯಂ ಸಲ್ಫೇಟ್ | ಸೂಪರ್ ಫಾಸ್ಫೇಟ್ | ಮ್ಯೂರಿಯೇಟ್ ಆಫ್ ಪೊಟ್ಯಾಷ್ |
| ೧. ನೆಟ್ಟವರ್ಷ | — | — | — |
| ೨. ೨ ಮತ್ತು ೩ನೇ ವರ್ಷ | ೦.೨೫ | ೦.೨೫ | ೦.೨೫ |
| ೩. ೪ನೇ ವರ್ಷ | ೦.೫೦ | ೦.೨೫ | ೦.೫೦ |
| ೪. ೫ನೇ ಮತ್ತು ೬ನೇ ವರ್ಷ | ೧.೦೦ | ೦.೫೦ | ೦.೭೫ |
| ೫. ೬ನೇ ವರ್ಷದ ನಂತರ ಪ್ರತಿ ವರ್ಷಕ್ಕೆ | ೧.೫೦ | ೧.೦೦ | ೧.೦೦ |

ಸಸಿಗಳು ಎಳೆಯವಾಗಿರುವಾಗ ಗೊಬ್ಬರವನ್ನು ಸಸಿಯ ಸುತ್ತಲೂ ಎರಚಿ ಅಗೆದುಬಿಡಬೇಕು. ಆಗ ಕಾಂಪೋಸ್ಟ್ ಮತ್ತು ಹಸಿರೆಲೆ ಗೊಬ್ಬರಗಳನ್ನು ಕೊಡಬಾರದು. ಇದರಿಂದ ಗೆದ್ದಲುಗಳ ಹಾವಳಿ ಹೆಚ್ಚಿ ಆಗತಾನೇ ಹೊರಟಿರುವ ಬೇರುಗಳು ನಾಶವಾಗುತ್ತವೆ. ನೆಟ್ಟ ೬ ವರ್ಷಗಳಲ್ಲಿ ಅವು ಫಲಕೊಡಲು ಪ್ರಾರಂಭಿಸಿದಾಗಿನಿಂದ ಈ ಎಲ್ಲಾ ಗೊಬ್ಬರದ ಪೂರೈಕೆ ಹೆಚ್ಚಾಗಿ ಬೇಕಾಗುತ್ತದೆ.

ಭೂಮಿಯಲ್ಲಿ ಸಾಕಷ್ಟು ತೇವವಿದ್ದಾಗ ಗೊಬ್ಬರ ಕೊಡಬೇಕು. ತೇವವಿಲ್ಲದಿದ್ದಾಗ ಕೊಟ್ಟಲ್ಲಿ ಬೇರಿಗೆ ತೊಂದರೆಯಾಗಬಹುದು. ಬಹಳ ಮಳೆಯಿದ್ದಲ್ಲಿ ಗೊಬ್ಬರಾಂಶ ಕೊಚ್ಚಿಹೋಗಬಹುದಾಗಿದೆ. ಆದ್ದರಿಂದ ಮುಂಗಾರು ಮಳೆಯು ಪ್ರಾರಂಭವಾಗಿ ಭೂಮಿ ತಂಪಾದಾಗ ಗೊಬ್ಬರ ಕೊಡಬೇಕು. ಮಳೆ ಕಡಮೆಯಾಗುವ ಪ್ರದೇಶ

ದಲ್ಲಿ ಮೇ–ಜೂನ್ ತಿಂಗಳಿಂದ ಸೆಪ್ಟಂಬರ್‌ವರೆಗೂ ಕೊಡ ಬಹುದು.

ಸರಿಯಾದ ಸಾರಜನಕ ಪೂರೈಕೆ ಗಿಡಬೆಳೆಯಲೂ, ಹೆಚ್ಚಿನ ಎಲೆ ಬೆಳೆಯಲೂ ಅನುಕೂಲವಾಗುತ್ತದೆ. ಅದು ಕಡಮೆಯಾದಲ್ಲಿ ಗಿಡಗಳು ಸರಿಯಾಗಿ ಬೆಳೆಯದೆ ಎಲೆಗಳು ಹಳದಿಯಾಗಿ ಅನಾರೋಗ್ಯಕರವಾಗಿ ಕಾಣುತ್ತದೆ. ರಂಜಕ ಬೇರಿನ ಬೆಳವಣಿಗೆ ಮತ್ತು ಕಾಯಿಗಳ ಸರಿಯಾದ ಬಲಿಕೆಗೆ ಅನುಕೂಲವಾಗುತ್ತದೆ. ರಂಜಕ ಕಡಮೆಯಾದಲ್ಲಿ ಎಲೆಗಳು ಹಳದಿಯಾಗುತ್ತವೆ. ರಂಜಕ ಪೊಟ್ಯಾಷ್ ಎರಡೂ ಜೊತೆಸೇರಿ, ಮರದಲ್ಲಿ ಹೆಚ್ಚಾಗಿ ಹೂಕಟ್ಟಿ, ಕಾಯಿ ಚೆನ್ನಾಗಿ ಬಲಿಯಲೂ, ರೋಗರುಜಿನಾದಿಗಳನ್ನು ತಡೆಗಟ್ಟಲೂ ಶಕ್ತಿಕೊಡುತ್ತದೆ. ಪೊಟ್ಯಾಷ್ ಕಾಯಿ ದೊಡ್ಡದಾಗಿ, ತೂಕವಾಗಿ ತಿರುಳು ದಪ್ಪವಾಗಿ ಬಹುಕಾಲ ನಿಲ್ಲಬಲ್ಲುದಾಗಲು ಸಹಾಯಕವಾಗುತ್ತದೆ.

ಗಿಡದ ಸುತ್ತಲೂ ೬–೯ ಅಂಗುಲ ಆಳ, ೨–೩ ಅಡಿ ಅಗಲದ ಗುಳಿ ತೋಡಿ ಅದರಲ್ಲಿ ಕೃತಕ ಗೊಬ್ಬರ ಹರಡಿ, ಮೇಲೆ ಕಾಂಪೋಸ್ಟ್ ಮತ್ತು ಹಸಿರೆಲೆ ಗೊಬ್ಬರ ತುಂಬಿ ಮುಚ್ಚಬೇಕು. ಉಪಬೆಳೆ ಬೆಳೆದಿರುವೆಡೆ ಮತ್ತು ಒತ್ತಾಗಿ ನೆಟ್ಟಿರುವೆಡೆ ಈ ಮಾರ್ಗ ಅನುಸರಿಸಲೇಬೇಕು. ಉಪ ಬೆಳೆಗಳಿಲ್ಲದೆ ಸಮಾನಾಂತರದಿಂದ ನೆಟ್ಟ ತೋಟಗಳಲ್ಲಿ ಬೇಕಾದಲ್ಲಿ, ಗೊಬ್ಬರವನ್ನು ತೋಟದಲ್ಲೆಲ್ಲಾ ಎರಚಿ ಉತ್ತು ಬಿಡಬಹುದು. ಸರಿಯಾದ, ಸಕಾಲದ ಬೇಸಾಯ ಮತ್ತು ಗೊಬ್ಬರದ ಪೂರೈಕೆ ಇಳುವರಿಯನ್ನು ಹೆಚ್ಚಿಸುತ್ತವೆ.

ನೀರಿನ ಪೂರೈಕೆಯೂ ಇವುಗಳಷ್ಟೇ ಮುಖ್ಯ. ಮಳೆ ಸಾಲದ ಮೈದಾನ ಪ್ರದೇಶಗಳಲ್ಲಿ ಆಗಾಗ್ಗೆ ನೀರು ಹಾಯಿಸಿ, ಭೂಮಿಯಲ್ಲಿ ಸಾಕಷ್ಟು ತನುವಿರುವಂತೆ ನೋಡಿಕೊಳ್ಳಬೇಕು. ಬಹು ಹೆಚ್ಚು ಮಳೆ

ಯಾಗುವ ತೀರಪ್ರದೇಶದಲ್ಲೂ ಬೇಸಿಗೆಯಲ್ಲಿ ಭೂಮಿ ಹೆಚ್ಚಾಗಿ ಒಣಗುವುದರಿಂದ, ಅಲ್ಲಿಯೂ ಕೂಡ ಬೇಸಗೆಯಲ್ಲಿ ನೀರು ಕಟ್ಟುವ ಏರ್ಪಾಡಾಗಬೇಕು. ಸಮುದ್ರತೀರದಲ್ಲಿರುವ ತೋಟಗಳಿಗೆ ಉಪ್ಪು ನೀರು ಹಾಯಿಸುವುದರಿಂದ ಯಾವ ಕೆಡಕೂ ಆಗುವುದಿಲ್ಲ. ಫಲವತ್ತಾದ ಜಿಗಟು ಭೂಮಿಗಳಲ್ಲಿ ಮಾತ್ರ ಉಪ್ಪುನೀರು ಹಾನಿಕರ. ನೀರು ಸಮಂಜಸವಾಗಿದ್ದಲ್ಲಿ, ಎಲೆಗಳ ಉತ್ಪತ್ತಿ ಹೆಚ್ಚಿ ಗಿಡಗಳು ಸೊಂಪಾಗಿ ಬೆಳೆಯುತ್ತವೆ.

## ಎಡೆ ನೆಡುವುದು

ಯಾವ ಗಿಡಕ್ಕೇ ಆಗಲೀ ಒಂದು ವಯೋಮಿತಿ ಇದೆ. ತದನಂತರ ಅದು ಫಲಪ್ರದವಾಗಿರದೆ ಅಪ್ರಯೋಜಕವಾಗುತ್ತದೆ. ತೆಂಗಿನಲ್ಲಿ ಗುಜ್ಜ ಗಿಡಗಳ ವಯಸ್ಸು ಉದ್ದ ಗಿಡಗಳಿಗಿಂತ ಬಹು ಕಡಮೆ. ಒಳ್ಳೆಯ ಫಲವತ್ತಾದ ಭೂಮಿಗಳಲ್ಲಿ ೬೦ನೇ ವರ್ಷದ ಮೇಲೂ ತೆಂಗು ಒಳ್ಳೆಯ ಫಲಕೊಡಬಲ್ಲದು. ಆದ್ದರಿಂದ ಸಾಧಾರಣವಾಗಿ ತೆಂಗಿನ ಫಲದಾಯಕ ಮಿತಿ ೬೦ ವರ್ಷವೆಂದು ಅಂದಾಜು ಮಾಡಲಾಗಿದೆ.

ಇಳುವರಿ ಕಡಮೆಯಾಗತೊಡಗಿದಾಗ ಬೇರೆ ಸಸಿಗಳನ್ನು ಎಡೆ ನೆಡುವುದು ಉತ್ತಮ. ತೋಟದ ಉತ್ಪತ್ತಿ ಕಡಮೆಯಾಗದಂತೆ ಇದನ್ನು ಸಕಾಲದಲ್ಲಿ ಮಾಡಬೇಕು. ಬಹುಬೇಗ ನೆಟ್ಟಲ್ಲಿ ಸಸಿಗಳು ಹೆಚ್ಚಿ, ಬೇರುಗಳ ಬೆಳವಣಿಗೆ ಕುಂಠಿತವಾಗಿ ಇಳುವರಿ ಕಡಮೆಯಾಗುತ್ತದೆ. ನಿಧಾನವಾದಲ್ಲಿ ಹಳೇ ಗಿಡಗಳು ನಿಷ್ಫಲವಾಗಿ ಎಳೇ ಸಸಿಗಳು ಫಲಕೊಡುವವರೆಗೂ ಆದಾಯವಿಲ್ಲದಾಗಬಹುದು.

ಆದ್ದರಿಂದ ಫಲ ಕಡಮೆಯಾಗಬಹುದಾದಾಗ ಸಸಿ ನೆಡಬೇಕು. ನೆಟ್ಟ ೭–೮ ವರ್ಷಗಳಲ್ಲಿ ಹಳೇ ಗಿಡಗಳನ್ನೆಲ್ಲಾ ತೆಗೆಯಬೇಕು. ಅಷ್ಟರಲ್ಲಿ ಎಳೇ ಸಸಿಗಳು ಫಲಕೊಡಲು ಪ್ರಾರಂಭಿಸುವುದರಿಂದ ನಷ್ಟವಾಗುವುದಿಲ್ಲ.

ಹೊಸದಾಗಿ ನೆಟ್ಟ ಸಸಿಗಳಿಗೂ, ಹಳೇ ಮರಗಳಿಗೂ ಸಾಕಾಗುವಷ್ಟು ಗೊಬ್ಬರವನ್ನು ಒದಗಿಸಬೇಕು. ಸಸಿಗಳಿಗೆ ಗೊಬ್ಬರದ ಪೂರೈಕೆ ಸರಿಯಾಗದಿದ್ದಲ್ಲಿ ಅವು ಬೆಳೆಯದೆ ಕರಟಾಗುತ್ತವೆ.

ಎಡೆ ನೆಡುವಾಗ ಸಸಿಗಳನ್ನು ಹಳೇ ಮರಗಳ ಸಾಲುಗಳ ನಡುವೆ ಗುಂಡಿ ತೆಗೆದು ನೆಡುವುದುತ್ತಮ. ಹಳೇ ಮರದ ಪಕ್ಕದಲ್ಲೇ ನೆಡಬೇಕಾದಲ್ಲಿ, ಹಳೇ ಮರಗಳನ್ನು ಬೇರುಸಹಿತ ತೆಗೆದುಹಾಕಿ, ಆ ಗುಂಡಿಯಲ್ಲಿ ಸೊಪ್ಪುಸದೆ ತುಂಬಿ ಸುಟ್ಟು, ನಂತರ ಸಸಿ ನೆಡಬೇಕು. ಇಲ್ಲದಿದ್ದಲ್ಲಿ ಹಳೇ ಮರದ ಬೇರುಗಳು ಎಳೇ ಸಸಿಗಳನ್ನು ಸರಿಯಾಗಿ ಬೆಳೆಯಲು ಬಿಡುವುದಿಲ್ಲ.

## ಉಪಬೆಳೆಗಳು

ಸಸಿಗಳ ಮಧ್ಯೆ ಹೆಚ್ಚಿನ ಅಂತರವಿರುವುದರಿಂದ, ಅನೇಕ ಉಪಬೆಳೆಗಳನ್ನು ಬೆಳೆಯಬಹುದು. ಇದರಿಂದ ಉತ್ಪತ್ತಿ ಅಧಿಕವಾಗಿ ಲಾಭವಾಗುತ್ತದೆ. ಬೆಳೆಯಬಹುದಾದ ಉಪಬೆಳೆಯನ್ನು ಭೂ ಮತ್ತು ವಾಯುಗುಣದ ಆಧಾರದಿಂದ ನಿರ್ಧರಿಸಬೇಕು. ಉಪಬೆಳೆಗಳಿಂದ ತೆಂಗಿಗೆ ತೊಂದರೆಯಾಗಬಾರದು. ಸಸಿಗಳು ಎಳೆಯವಾಗಿರುವಾಗ ಉಪಬೆಳೆಗಳನ್ನು ಬೆಳೆಯುವುದರಿಂದ ಭೂಮಿ ಹಸನಾಗಿ, ಫಸಲಿಗೆ ತೊಂದರೆಯಾಗುವುದಿಲ್ಲ. ಆದರೆ ಫಸಲು ಕೊಡುವ ಹಳೇ

ತೋಟಗಳಲ್ಲಿ ಉಪಬೆಳೆಗಳನ್ನು ಬೆಳೆಸುವಲ್ಲಿ ಎಚ್ಚರಿಕೆ ವಹಿಸಬೇಕು. ತೆಂಗಿಗೂ, ಉಪಬೆಳೆಗಳಿಗೂ ಸಾಕಷ್ಟು ಗೊಬ್ಬರ ಒದಗಿಸದಿದ್ದಲ್ಲಿ ಎರಡು ಬೆಳೆಗಳೂ ಚೆನ್ನಾಗಿ ಬೆಳೆಯಲಾರವು.

ಹೊಸ ತೋಟಗಳಲ್ಲಿ ಮರಗೆಣಸು, ಗೆಣಸು, ಬಾಳೆ, ಸುವರ್ಣ ಗೆಡ್ಡೆ, ಕೆಸವಿನಗೆಡ್ಡೆ, ಅರಿಶಿನ, ಶುಂಠಿ, ರಾಗಿ, ಜೋಳ, ಕಬ್ಬು, ಹುರುಳಿ, ಉದ್ದು, ಅನಾನಸ್, ಕಡಲೇಕಾಯಿ ಮೊದಲಾದವನ್ನು ಬೆಳೆಯಬಹುದು. ಹಳೆಯ ತೋಟಗಳಲ್ಲಿ ಇವನ್ನು ಬೆಳೆಯಬೇಕಾದಲ್ಲಿ ಗಿಡದ ಸುತ್ತಲೂ ೬ ಅಡಿ ಸ್ಥಳ ಬಿಟ್ಟಿರಬೇಕು. ಉಪಬೆಳೆಗೂ ತೆಂಗಿಗೂ ಬೇಕಾದ ಗೊಬ್ಬರ ಪ್ರಮಾಣವನ್ನು ಕಡ್ಡಾಯವಾಗಿ ಒದಗಿಸಲೇಬೇಕು.

ತೆಂಗಿನ ತೋಟಗಳಲ್ಲಿ ಇತರ ಮರಗಳನ್ನು ಬೆಳೆಯುವುದೂ ವಾಡಿಕೆಯಲ್ಲಿದೆ. ಅಲ್ಲಲ್ಲಿ ಮಾವು, ಅಡಕೆ, ಹಲಸು, ಸೀಬೆ, ಚಿಕ್ಕು, ನಿಂಬೆ, ಮೋಸುಂಬಿ ಮತ್ತಿನ್ನಿತರ ಮರಗಳನ್ನೂ ನೆಡುವುದುಂಟು. ಇವುಗಳಿಂದ ಮಧ್ಯೆ ಬೇಸಾಯ ಮಾಡಲು ತೊಂದರೆಯಾಗುತ್ತದೆ. ತೆಂಗಿನ ಇಳುವರಿ ಕಡಮೆಯಾಗುತ್ತದೆ. ಅಲ್ಲದೆ ಇವಕ್ಕಿರುವ ರೋಗ ರುಜಿನಾದಿಗಳು ತೆಂಗಿಗೂ ಹರಡಬಹುದಾಗಿದೆ. ಆದ್ದರಿಂದ ಸಾಧ್ಯವಾದಷ್ಟೂ ತೆಂಗಿನ ತೋಟದ ಮಧ್ಯೆ ಇತರ ಮರಗಳನ್ನು ಬೆಳೆಸಬಾರದು. ಬೇಕಾದಲ್ಲಿ ಅವುಗಳನ್ನು ತೋಟದ ಸುತ್ತಲೂ ಬೆಳೆಸಬಹುದು.

## ಉತ್ಪತ್ತಿ

ತೆಂಗಿನ ಉತ್ಪತ್ತಿಯನ್ನು ಮರಕ್ಕೆ ಅಥವಾ ಎಕರೆಗೆ ದೊರಕುವ ಕಾಯಿಗಳ ಸಂಖ್ಯೆ, ಕೊಬ್ಬರಿಯ ತೂಕ ಅಥವಾ ಎಣ್ಣೆಯ ಉತ್ಪತ್ತಿ,

ಇವುಗಳಲ್ಲಿ ಲೆಕ್ಕಮಾಡಬಹುದು. ಭಾರತದಲ್ಲಿ ಕಾಯಿಗಳ ಸಂಖ್ಯೆ ಮುಖ್ಯ. ಇತರೇ ದೇಶಗಳಲ್ಲಿ ಕೊಬ್ಬರಿ ಇಳುವರಿಯೇ ಉತ್ಪತ್ತಿಯ ಗುರಿ.

ಗಿಡದ ಪೂರ್ವೋತ್ತರ ಚರಿತ್ರೆ, ವಾಯು ಮತ್ತು ಭೂಗುಣ, ಗೊಬ್ಬರ ಮತ್ತು ಬೇಸಾಯ, ರೋಗರುಜಿನಾದಿಗಳು—ಇವುಗಳನ್ನು ತೆಂಗಿನ ಉತ್ಪತ್ತಿ ಅವಲಂಬಿಸಿದೆ.

ಗಿಡದ ವಯಸ್ಸೂ ಮುಖ್ಯ. ಗುಜ್ಜಗಿಡಗಳು ೩–೪ನೇ ವರ್ಷದಲ್ಲೂ, ಉದ್ದನೆಯ ಗಿಡಗಳು ೬–೭ನೇ ವರ್ಷದಲ್ಲೂ ಫಲಕೊಡಲು ಪ್ರಾರಂಭಿಸಿ, ಗಿಡ್ಡ ಗಿಡಗಳು ೨೦-೨೫ ವರ್ಷವೂ, ಉದ್ದ ಮರಗಳು ೪೦–೫೦ ವರ್ಷವೂ ಚೆನ್ನಾಗಿ ಫಲಕೊಡುತ್ತವೆ. ಅಲ್ಲಿಂದ ಮುಂದೆ ಗಿಡಗಳಲ್ಲಿ ಕ್ರಮೇಣ ಉತ್ಪತ್ತಿ ಕಡಮೆಯಾಗುತ್ತದೆ.

ಫಲವತ್ತಾದ ಉತ್ತಮ ಭೂಮಿಯಲ್ಲಿ ೫–೬ನೇ ವರ್ಷದಿಂದ ೬೦ ವರ್ಷದವರೆಗೂ ಒಳ್ಳೆಯ ಉತ್ಪತ್ತಿ ಸಿಗಬಹುದು. ಭೂಮಿಯು ಕಲ್ಲುಜರಗಾಗಿದ್ದು ಗಟ್ಟಿಯಾಗಿದ್ದಲ್ಲಿ ೧೦–೧೨ನೇ ವರ್ಷ ಉತ್ಪತ್ತಿ ಪ್ರಾರಂಭವಾಗಿ ಮರ ಬೇಗ ಬರಡಾಗಬಹುದು.

ಒಂದೇ ತಾಯಿಮರದಿಂದ ಚುನಾಯಿಸಲ್ಪಟ್ಟ ಸಮವಯಸ್ಕ ಸಸಿಗಳಲ್ಲೂ ಇಳುವರಿಯಲ್ಲಿ ಹೆಚ್ಚಿನ ಅಂತರವಿರಬಹುದು. ಅವುಗಳ ಫಲದಾಯಕ ವಯೋಮಿತಿಯಲ್ಲೂ ವ್ಯತ್ಯಾಸವಿರುತ್ತದೆ. ಸಾಮಾನ್ಯವಾಗಿ ಎಕರೆ ಒಂದಕ್ಕೆ ಫಿಲಿಪೈನ್ಸ್ ದೇಶದಲ್ಲಿ ೨೮೫೦ ಕಾಯಿಗಳೂ, ಭಾರತದಲ್ಲಿ ೨೦೦೦ ಕಾಯಿಗಳೂ, ಸಿಂಹಳದಲ್ಲಿ ೧೮೦೦ ಕಾಯಿಗಳೂ ಮತ್ತು ಮಲಯಾದಲ್ಲಿ ೧೪೦೦ ಕಾಯಿಗಳೂ ಉತ್ಪತ್ತಿಯಾಗುವುದೆಂದು ಅಂದಾಜು ಮಾಡಲಾಗಿದೆ. ಇದರಿಂದ ಭಾರತ ಪ್ರಪಂಚದಲ್ಲಿ ಎರಡನೆಯ ಸ್ಥಾನ ಗಳಿಸಿದೆ. ಭಾರತದ ವಿವಿಧ ಪ್ರದೇಶಗಳ ಉತ್ಪತ್ತಿಯಲ್ಲೂ ಬಹಳ ಅಂತರವಿದೆ. ಮದರಾಸಿನಲ್ಲಿ

ಎಕರೆಗೆ ೨೧೦೦ ಕಾಯಿಗಳೂ, ಮೈಸೂರಿನಲ್ಲಿ ೨೦೦೦ ಕಾಯಿಗಳೂ, ಕೇರಳದಲ್ಲಿ ೧೯೦೦ ಕಾಯಗಳೂ, ಅಸ್ಸಾಂನಲ್ಲಿ ಕೇವಲ ೧೦೦೦ ಕಾಯಿಗಳೂ ದೊರಕುವುದೆಂದು ತಿಳಿದುಬಂದಿದೆ.

ಭೂ ಮತ್ತು ವಾಯುಗುಣ ಉತ್ಪತ್ತಿಯ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತದೆ. ಸಕಾಲದಲ್ಲಿ ಮಳೆಯಾಗಿ, ಹೆಚ್ಚಿನ ಬಿಸಿಲಿಲ್ಲದೇ ಇದ್ದಲ್ಲಿ ಇಳುವರಿ ಸರಿಸಮವಾಗುತ್ತದೆ. ಮಳೆ ಕಡಮೆಯಾಗಿ, ನೀರಿಲ್ಲದಿದ್ದಲ್ಲಿ ಇಳುವರಿ ಕಡಮೆ. ಹೆಚ್ಚಿನ ಮಳೆಯಿಂದ ಮರಕ್ಕೆ ತೊಂದರೆಯಿಲ್ಲವಾದರೂ ಜೌಗು ಭೂಮಿಯಾದರೆ ಕಾಯಿ ಉದುರುತ್ತವೆ.

ಕೊಯ್ಲಿನ ವೈವಿಧ್ಯತೆಯಿಂದಲೂ ಇಳುವರಿ ವ್ಯತ್ಯಾಸವಾಗಬಲ್ಲುದು. ಹಣ್ಣಾಗಿ ಬಿದ್ದ ಕಾಯನ್ನು ಹೆಕ್ಕುವ ಅಭ್ಯಾಸದಿಂದ ಇಳುವರಿ ಕಡಮೆಯಾಗಬಹುದಾಗಿದೆ. ಎಳನೀರನ್ನು ಕೊಯ್ಯುವುದರಿಂದ ಇಳುವರಿ ಹೆಚ್ಚಿದರೂ ಮುಂದೆ ಮರದ ಶಕ್ತಿ ಕುಂದಬಹುದಾಗಿದೆ. ಆದ್ದರಿಂದ ಚೆನ್ನಾಗಿ ಬಲಿತ ಕಾಯಿಗಳನ್ನು ಕೊಯ್ದು ತೆಗೆಯುವುದೇ ಉತ್ತಮ ಹಾಗೂ ೩–೪ ವರ್ಷಗಳಿಗೊಮ್ಮೆ ಮರದಲ್ಲಿ ಎಳೆನೀರಿಗಾಗಿ ಕಾಯಿಗಳನ್ನು ಕೊಯಿದಲ್ಲಿ ಫಲ ಹೆಚ್ಚಬಹುದಾಗಿದೆ.

## ರೋಗಗಳು ಮತ್ತು ಅವುಗಳ ನಿವಾರಣೆ

ತೆಂಗಿನ ಮರ ಗಟ್ಟಿಯಾಗಿ, ದೃಢವಾಗಿ ಬೆಳೆದರೂ ಅವಕ್ಕೆ ಅನೇಕ ರೋಗಗಳು ತಗಲುತ್ತವೆ. ಇದರಿಂದ ಪ್ರತಿದೇಶದಲ್ಲೂ ಲಕ್ಷಾಂತರ ರೂಪಾಯಿಗಳ ನಷ್ಟವಾಗುತ್ತದೆ. ಫಿಲಿಫೈನ್ಸ್ ದ್ವೀಪಗಳಲ್ಲಿ

"ಕಡಾಂಗ್-ಕಡಾಂಗ್" ಎಂಬ ಸುಳೀಕೊಳೆ ರೋಗದಿಂದಲೇ ಪ್ರತಿವರ್ಷ ಸುಮಾರು ೧ ಕೋಟಿ ರೂಪಾಯಿ ನಷ್ಟವಾಗುವುದೆಂದು ಅಂದಾಜು ಮಾಡಲಾಗಿದೆ. ಕೇರಳದಲ್ಲೂ ಎಲೆ ಮತ್ತು ಬೇರು ಕೊಳೆಯುವ ರೋಗಗಳಿಂದ ಒಂದು ಕೋಟಿ ರೂಪಾಯಿಗಿಂತ ಹೆಚ್ಚಿನ ನಷ್ಟವಾಗುತ್ತದೆ.

೧. **ಸುಳಿಕೊಳೆಯುವ ರೋಗ** ಇವುಗಳೆಲ್ಲೆಲ್ಲಾ ಮುಖ್ಯವಾದದ್ದು. ಇದರಿಂದ ಮರವೇ ಸತ್ತುಹೋಗುತ್ತವೆ. ಈ ರೋಗ ಪ್ರಪಂಚದ ಎಲ್ಲಾ ತೆಂಗು ಬೆಳೆಯುವ ಪ್ರದೇಶದಲ್ಲೂ ಕಂಡುಬರುತ್ತದೆ. ಭಾರತದ ತೀರಪ್ರದೇಶದಲ್ಲಿ ಇದು ಹೆಚ್ಚು. ತಾಳೆ, ಭಗನಿ, ರಬ್ಬರ್ ಗಿಡಗಳಿದ್ದಲ್ಲಿ ರೋಗ ಬಹುಬೇಗ ಹರಡುತ್ತದೆ. ರೋಗ ತಗುಲಿದ ಮರದ ಸುಳಿ ಎಲೆ ಹಳದಿಯಾಗಿ ಜೋತುಬೀಳುತ್ತದೆ. ಅದನ್ನು ಎಳೆದಲ್ಲಿ ಸುಲಭವಾಗಿ ಕಿತ್ತುಬಂದು ತಳಕೊಳೆತು ದುರ್ವಾಸನೆ ಬರುವುದು ಕಂಡುಬರುತ್ತದೆ. ರೋಗ ಹರಡಿದಂತೆ ಇತರ ಎಲೆಗಳೂ ಕ್ರಮೇಣ ಹಳದಿಯಾಗಿ ಜೋತು ಬೀಳುತ್ತವೆ. ಹಳೆ ಎಲೆಗಳು ಮಾತ್ರ ಕೆಲಕಾಲ ಹಸಿರಾಗಿ ಹಾಗೇ ಉಳಿಯಬಹುದು. ಕಾಯಿಬಲಿಯದೆ ಉದುರುತ್ತವೆ. ಸುಳಿ ಕೊಳೆಯುವುದರಿಂದ ಮರ ಸಾಯುತ್ತದೆ.

ಈ ರೋಗ ಎಲ್ಲಾ ವಯಸ್ಸಿನ ಮರಗಳಿಗೂ ತಗಲಬಹುದು. ಮಳೆ ಹೆಚ್ಚಾಗಿದ್ದು, ಗಾಳಿಯಲ್ಲಿನ ತೇವಾಂಶ ಹೆಚ್ಚಿದ್ದಲ್ಲೂ, ಸುಳಿಯು ಬಳಿ ಕೀಟಗಳಿಂದ ಅಥವಾ ಇತರೇ ಕಾರಣಗಳಿಂದ ಏನಾದರೂ ಗಾಯವೇರ್ಪಟ್ಟಲ್ಲೂ, ಇದು ಬೇಗ ಸೋಂಕಿ ಹರಡುತ್ತದೆ. ರೋಗ ಬಲಿತ ಮರವನ್ನು ಉಳಿಸಲಾಗುವುದಿಲ್ಲ. ಅಂಥಹ ಮರಗಳನ್ನು ಕಡಿದು ತುದಿಯನ್ನು ಪೂರ್ಣ ಸುಟ್ಟು ನಾಶಪಡಿಸಬೇಕು. ಆಗತಾನೇ ರೋಗ ಸೋಂಕಿ ಸುಳಿಬಾಡುತ್ತಿರುವ ಮರಗಳ ಸುಳಿ

ಎಲೆಯನ್ನು ಕಿತ್ತು, ತುದಿಯ ಕೊಳೆತ ಭಾಗವನ್ನು ಕೊರೆದು ತೆಗೆದು ಬೋರ್ಡೋ ದ್ರಾವಣವನ್ನು ಸಿಂಪಡಿಸಬೇಕು. ಪಕ್ಕದಲ್ಲಿನ ಮರಗಳಿಗೂ ಸೋಂಕು ತಗಲದಂತೆ ಅವಕ್ಕೂ ಬೋರ್ಡೋ ದ್ರಾವಣವನ್ನು ಸಿಂಪಡಿಸುವುದು ಉತ್ತಮ.

೨. **ಸಿಡಿಲು :** ತೆಂಗಿನ ಮರಕ್ಕೆ ಅನೇಕ ಸಲ ಸಿಡಿಲು ಹೊಡೆಯುವುದುಂಟು. ಸಿಡಿಲು ಹೊಡೆದ ಮರದ ತುದಿಯೂ ಸುಳಿಕೊಳೆ ರೋಗದ ಚಿಹ್ನೆಗಳನ್ನೇ ಹೋಲುತ್ತವಾದರೂ, ಪೂರ್ತ ಸುಳಿ ಬೇಗ ಒಣಗಿ ಸತ್ತುಹೋಗುತ್ತದೆ. ಕ್ರಮೇಣ ಅಕ್ಕ ಪಕ್ಕದ ಮರಗಳ ಸುಳಿಯೂ ಒಣಗಲಾರಂಭಿಸುತ್ತವೆ. ತೋಟದ ಸಿಡಿಲು ಹೊಡೆದ ಭಾಗದ ಮರಗಳೆಲ್ಲಾ ಹೀಗೆ ನಾಶವಾಗಬಹುದು. ಇದರಲ್ಲಿ ಹಳೇ ಎಲೆಗಳು ಮೊದಲು ಒಣಗಿ ಜೋತುಬೀಳುತ್ತವೆ. ಎಳೆ ಎಲೆಗಳು ಕೆಲಕಾಲ ನೆಟ್ಟಗೆ ನಿಂತಿರಬಹುದಾಗಿದೆ. ಸಿಡಿಲು ಹೊಡೆದ ಮರಗಳನ್ನು ಉಳಿಸಲಾಗುವುದಿಲ್ಲ.

೩. **ಎಲೇ ಕೊಳೆಯುವ ರೋಗ** ಕೇರಳದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಒಳಭಾಗದ ಎಲೆಗಳ ತುದಿ ಕಪ್ಪಗಾಗಿ ಒಣಗಿ ಚೂರು ಚೂರಾಗಿ ಮುರಿದು ಗಾಳಿಯಲ್ಲಿ ತೂರಿಹೋಗುತ್ತದೆ. ಇದರಿಂದ ಎಲೆಗಳ ಕಡ್ಡಿಗಳು ಮಾತ್ರ ನಿಂತಿರುತ್ತವೆ. ಸುಳಿಯ ಬಳಿ ಕಂದು ಬಣ್ಣದ ಮಚ್ಚೆಗಳು ಕಾಣಿಸಿ ಬೆಳೆದು ಮರದ ಮೇಲ್ಭಾಗದಲ್ಲೆಲ್ಲಾ ಹರಡುತ್ತದೆ. ಈ ಭಾಗಗಳು ಮೃದುವಾಗಿ, ಹುಳುಗಳು ಕೊರೆಯಲು ಅನುಕೂಲವಾಗುತ್ತದೆ. ಕೊಳೆತ ಭಾಗ ಒಣಗಿದಾಗ ಕಲ್ಲಿನಂತಾಗಿ ಹೊಸ ಎಲೆಗಳು ಹೊರಬರದಂತೆ ತಡೆಯುತ್ತದೆ. ಇದರಿಂದ ಗಿಡದ ಶಕ್ತಿ ಕುಂದಿ ಕಾಯಿ ಕಟ್ಟದೆ ಗಿಡ ನಿಧಾನವಾಗಿ ಸಾಯುತ್ತದೆ. ಈ ರೋಗ ಎಲ್ಲಾ ವಯಸ್ಸಿನ ಗಿಡಗಳಿಗೂ ತಗುಲಬಹುದಾಗಿದೆ. ರೋಗ ತಗುಲಿದ ಮತ್ತು ಸುತ್ತುಮುತ್ತಲಿನ ಎಲ್ಲಾ

ಮರಗಳ ಸುಳಿ ಮತ್ತು ಎಲೆಗಳಿಗೆ ಪೂರ್ಣ ತಗಲುವಂತೆ ಬೋರ್ಡೋ ದ್ರಾವಣವನ್ನು ಒಂದೆರಡು ಸಲ ಸಿಂಪಡಿಸಬೇಕು. ಹಾಗೂ ಉತ್ತಮ ಬೇಸಾಯ ಮತ್ತು ಹೆಚ್ಚಿನ ಪೊಟ್ಯಾಷ್ ಮತ್ತು ರಂಜಕ ಗೊಬ್ಬರಗಳನ್ನು ಕೊಡಬೇಕು. ಇದರಿಂದ ರೋಗವನ್ನು ತಡೆಗಟ್ಟಿ ಗಿಡ ಕುದುರುವಂತಾಗುತ್ತದೆ.

೪. **ಎಲೆಯ ಮಚ್ಚೆ ಮತ್ತು ಚುಕ್ಕೇ ರೋಗಗಳು:** ಇವು ಹಳೇ ಎಲೆಗಳ ಪತ್ರವೃಂದಗಳಲ್ಲಿ ಹಳದಿ ಚುಕ್ಕೆಯಂತಹ ಮಚ್ಚೆಗಳಿಂದ ಪ್ರಾರಂಭವಾಗುತ್ತದೆ. ಅವುಗಳ ಸುತ್ತಲೂ ಕಂದು ಬಣ್ಣದ ಅಂಚಿರುತ್ತದೆ. ಇವು ಬೆಳೆದು, ಹೆಚ್ಚಿ ಕೂಡಿ, ಅಗಲವಾದ ಕೊಳೆತ ಭಾಗಗಳು ಉತ್ಪನ್ನವಾಗುತ್ತವೆ. ಕೆಲವು ವೇಳೆ ಅವು ಮಧ್ಯ ಕಾಂಡದ ಮೇಲೂ ಪ್ರಾರಂಭವಾಗಬಹುದು. ರೋಗಾಣುಗಳಿಂದ ಬರುವ ಇನ್ನೊಂದು ವಿಧ ಮಚ್ಚೇ ರೋಗದಿಂದ ಎಲೆಗಳ ತುದಿ ಮೊದಲು ಒಣಗಲುಪಕ್ರಮಿಸುತ್ತದೆ. ಇವುಗಳಿಂದ ಅಲ್ಲಲ್ಲಿ ಎಲೆಗಳ ಕೆಲಭಾಗ ಒಣಗಿದಂತಾಗಿ ಮರಗಳು ಅಸಹ್ಯವಾಗಿ ಕಾಣುತ್ತದೆ. ಬೋರ್ಡೋ ಮಿಶ್ರಣವನ್ನು ವರ್ಷಕ್ಕೆ ಎರಡಾವರ್ತಿ ಎಲೆಗಳಿಗೆಲ್ಲಾ ಚೆನ್ನಾಗಿ ಹರಡುವಂತೆ ಸಿಂಪಡಿಸಬೇಕು. ಜೌಗು ಪ್ರದೇಶವಾಗಿದ್ದಲ್ಲಿ ಆಳವಾದ ಕಡಗುಗಳನ್ನು ಏರ್ಪಡಿಸಿ, ಮರಗಳಿಗೆ ಪೊಟ್ಯಾಷ್ ಗೊಬ್ಬರವನ್ನು ಕೊಡಬೇಕು.

೫. **ಕಾಯಿ ಉದುರುವಿಕೆ:** ಇದಕ್ಕೆ ಅನೇಕ ಕಾರಣಗಳಿವೆ. ಭೂಮಿಯಲ್ಲಿ ಬಹು ಕಡಮೆ ಅಥವಾ ಬಹು ಹೆಚ್ಚಿನ ತೇವಾಂಶ ದಿಂದಲೂ ಕೀಟಗಳ ಉಪದ್ರವದಿಂದಲೂ, ಕೊಳೇರೋಗದಿಂದಲೂ ಅವು ಉದುರಬಹುದು. ಇದಕ್ಕೆ ಭೂಗುಣವನ್ನು ಹದಗೊಳಿಸಿ, ಹೆಚ್ಚಿನ ಗೊಬ್ಬರ ಒದಗಿಸಿ, ಗೊನೆಗಳಿಗೆಲ್ಲಾ ಬೋರ್ಡೋ ಮತ್ತು ಕೀಟಮಾರಕ ದ್ರಾವಣಗಳ ಮಿಶ್ರಣವನ್ನು ಸಿಂಪಡಿಸಬೇಕು.

**ಕಾಯಿಕೊಳೆ** ಹೆಚ್ಚು ಮಳೆಯಾಗುವಲ್ಲಿ ಕಂಡುಬರುತ್ತದೆ. ಎಳೆಯ ಕಾಯಿಯ ತೊಟ್ಟಿನ ಬಳಿ ಹಚ್ಚಹಸುರಾಗಿ, ನೀರು ತೊಯ್ದಿರುವಂತಹ ಮಚ್ಚೆ ಕಾಣಿಸಿ, ಹರಡಿ ಕಂದುಬಣ್ಣಕ್ಕೆ ತಿರುಗುತ್ತದೆ. ಚಿಪ್ಪು ಬಲಿಯದಿದ್ದಲ್ಲಿ ರೋಗ ತಿರುಳಿಗೂ ಹರಡಬಹುದು. ಕಾಯಿಗಳು ಉದುರುತ್ತವೆ. ಇದಕ್ಕೂ ಬೋರ್ಡೋ ದ್ರಾವಣವನ್ನು ಮಳೆಗಾಲಕ್ಕೆ ಮುಂಚೆ ಮತ್ತು ನಂತರ ಸಿಂಪಡಿಸುವುದರಿಂದ ತಡೆಗಟ್ಟಬಹುದು.

**೬. ರಸ ಸೋರುವಿಕೆ:** ಇದು ಕಾಂಡದ ಮೇಲೆ ಕಾಣಿಸುವ ರೋಗ. ಮರದ ತೊಗಟೆಯ ಸಂದಿಯಿಂದ ಅಲ್ಲಲ್ಲಿ ಕಂದು ಬಣ್ಣದ ರಸ ಹೊರಸೂಸುವುದು. ಈ ರಸ ಮುಂದೆ ಒಣಗಿ ಕಪ್ಪಗಾಗುತ್ತದೆ. ಶಿಲೀಂದ್ರದ ಬೆಳವಣಿಗೆಯಿಂದ ಕಾಂಡದ ಒಳಭಾಗ ಕೊಳೆತು ಅಲ್ಲಿಯ ರಸ ಹೊರಬರುವುದೇ ಇದಕ್ಕೆ ಕಾರಣ. ಈ ರೀತಿ ಕೊಳೆತ ಭಾಗವನ್ನು ಕೊರೆದು ಬಿಸುಟು, ಗಾಯವನ್ನು ಡಾಮ್ರು ಅಥವಾ ಬೋರ್ಡೋ ಗಟ್ಟಿ ದ್ರಾವಣದಿಂದ ಮುಚ್ಚಬೇಕು.

**ಅಣಬೇ ರೋಗ:** ಇದು ಮೈಸೂರಿನಲ್ಲಿ ತೆಂಗಿನ ಬಹು ಮುಖ್ಯ ರೋಗ. ರೋಗ ತಗುಲಿದ ಮರಗಳ ಹಳೇ ಎಲೆಗಳು ಜೋತು ಬಿದ್ದು, ಮರಕ್ಕೆ ಬಹುಕಾಲ ಅಂಟಿಕೊಂಡಿದ್ದು ಕಾಯಿ ಕಟ್ಟುವುದಿಲ್ಲ. ಹೊಸ ಎಲೆಗಳು ಕಡಮೆಯಾಗಿ, ಗಿಡ್ಡವಾಗಿ ಬರುತ್ತವೆ. ಕಾಂಡದ ಬುಡದಲ್ಲಿ ಅಲ್ಲಲ್ಲಿ ಕಂದು ಬಣ್ಣದ ರಸ ಸೋರುವುದು ಕಂಡುಬರುತ್ತದೆ. ಕೆಲಸಮಯ ಶಿಲೀಂದ್ರದ 'ಅಣಬೆ' ಬುಡದ ಬಳಿ ಬೆಳೆಯುತ್ತದೆ. ರೋಗತಗುಲಿದ ೨, ೩ ವರ್ಷಗಳಲ್ಲಿ ಮರ ಸತ್ತುಹೋಗುತ್ತದೆ. ರೋಗ ತಗುಲಿದ ಮರವನ್ನು ಉಳಿಸಲ ಸಾಧ್ಯವಾದ್ದರಿಂದ, ಅಂತಹ ಮರವನ್ನು ಬೇರು ಸಮೇತ ಕಿತ್ತು, ಬುಡ ಮತ್ತು ಬೇರುಗಳನ್ನು ಸುಟ್ಟುಬಿಡಬೇಕು. ಬೇರು ತೆಗೆದ

ಗುಂಡಿಯಲ್ಲಿ ಸೊಪ್ಪುಸದೆ ತುಂಬಿ ಸುಡಬೇಕು. ಅದರ ಸುತ್ತಲೂ ೩ ಅಡಿ ಆಳದ, ೨ ಅಡಿ ಅಗಲದ ಕಡಗುಗಳನ್ನು ತೆಗೆದಲ್ಲಿ ರೋಗ ಬೇರೆ ಮರಗಳಿಗೆ ಹರಡದಂತೆ ತಡೆಗಟ್ಟಬಹುದು. ಸುತ್ತಲಿರುವ ಮರಗಳ ಬುಡದ ಸುತ್ತಲೂ ಗಿಡಕ್ಕೆ ೨–೩ ಪೌಂಡಿನಷ್ಟು ಗಂಧಕದ ಪುಡಿಯನ್ನು ಚೆಲ್ಲಿ ಕದಡಿ ಬಿಟ್ಟಲ್ಲಿ ರೋಗದ ಬೆಳವಣಿಗೆಯನ್ನು ನಾಶಪಡಿಸಬಹುದಾಗಿದೆ.

**೮. ಸುಳಿಬಾಡುವಿಕೆ:** ಇವುಗಳಲ್ಲಿ ಅನೇಕ ವಿಧವಿವೆ. ಎಲೆಗಳ ತುದಿ ಹಳದಿಯಾಗಿ, ಎಲೆಗಳು ಗಿಡ್ಡವಾಗಿ, ಕಾಂಡವೂ ಕ್ರಮೇಣ ಸಣ್ಣಗಾಗಿ ಚೂಪಾಗಬಹುದು. ಅಥವಾ ಎಲೆಗಳು ಕೆಂಚಗಾಗಿ ಜೋತುಬಿದ್ದು ಉದುರಬಹುದು. ಗೋದಾವರಿ ಜಿಲ್ಲೆಯಲ್ಲಿ ಫಲಕೊಡುವ ಮರಗಳು ಇದ್ದಕ್ಕಿದ್ದಂತೆ ಒಂದೆರಡು ವರ್ಷ ಹೆಚ್ಚಿನ ಫಲಕೊಟ್ಟು ನಂತರ ಬೆಳವಣಿಗೆ ಮತ್ತು ಫಲ ಬಹಳ ಕಡಮೆಯಾಗುತ್ತದೆ. ಎಲೆಗಳು ಹಳದಿಯಾಗಿ ಸಣ್ಣಗಾಗಿ ಸರಿಯಾಗಿ ಹರಡದೇ ಅಂಟಿಕೊಂಡಿರುತ್ತದೆ. ಕಾಯಿಗಳು ಸಣ್ಣಗಾಗಿ ಮೇಲೆಲ್ಲಾ ಒಡಕುಗಳುಂಟಾಗಿ, ರಸ ಸೋರುತ್ತದೆ. ಮರಗಳ ಬೇರುಗಳು ಹೆಚ್ಚಾಗಿ ಕೊಳೆತಿರುತ್ತವೆ. ಉತ್ತಮ ಸಾಗುವಳಿ ಹೆಚ್ಚಿನ ಗೊಬ್ಬರ ಸರಬರಾಜು ಮತ್ತು ಸಾಕಷ್ಟು ನೀರನ್ನು ಒದಗಿಸುವುದರಿಂದ ಇವನ್ನು ಸರಿಪಡಿಸಬಹುದು.

**೯. ಬೇರುಕೊಳೆ:** ರೋಗ ಈಗ ಕೆಲವು ವರ್ಷಗಳಿಂದ ಕೇರಳದ ಬಹುಭಾಗದಲ್ಲಿ ಹೆಚ್ಚಿನ ನಷ್ಟವುಂಟುಮಾಡುತ್ತಿದೆ. ೫–೬ ವರ್ಷ ಮೇಲ್ಪಟ್ಟ ವಯಸ್ಸಿನ ಸಸಿಗಳಿಗೇ ಇದು ತಗಲುವುದು ಹೆಚ್ಚು. ಎಲೆಗಳು ಬಾಡಿ ಜೋತು ಬೀಳುತ್ತದೆ. ತುದಿ ಕೊಳೆಯುತ್ತದೆ. ಸುಳಿಎಲೆಗಳು ಕ್ರಮೇಣ ಗಿಡ್ಡವಾಗುತ್ತದೆ. ಎಳೆಯ ಕಾಯಿಗಳು ಉದುರಲಾರಂಭಿಸುತ್ತವೆ. ರೋಗ ಉಲ್ಬಣವಾದಂತೆ ಸುಳಿ

ಸಣ್ಣಗಾಗಿ ಗಿಡ ಸಾಯುತ್ತದೆ. ಈ ರೋಗ ಗಿಡದಿಂದ ಗಿಡಕ್ಕೆ ಬೇಗ ಹಬ್ಬುವುದರಿಂದ ರೋಗದ ಗಿಡಗಳನ್ನು ತಕ್ಷಣ ನಾಶಪಡಿಸಬೇಕು. ಉತ್ತಮ ಬೇಸಾಯ ಮತ್ತು ಹೆಚ್ಚಿನ ಗೊಬ್ಬರ ಒದಗಿಸುವುದರಿಂದ ಅದನ್ನು ತಡೆಗಟ್ಟಬಹುದು.

## ಕೀಟಗಳ ಉಪದ್ರವ ಮತ್ತು ಅದರ ನಿವಾರಣೋಪಾಯ

ತೆಂಗಿಗೆ ಅನೇಕ ರೀತಿಯ ಉಪದ್ರವಕಾರಿ ಕೀಟಗಳ ಭಾದೆ ಯಿದ್ದು, ಸಕಾಲದಲ್ಲಿ ಅವನ್ನು ತಡೆಗಟ್ಟದಿದ್ದಲ್ಲಿ ಬಹಳ ನಷ್ಟವಾಗುತ್ತದೆ. ಸುಮಾರು ೧೧ಳ ಜಾತಿಯ ಕೀಟಗಳಿಂದ ಮರಕ್ಕೆ ಉಪದ್ರವವಿದೆಯೆಂದು ತಿಳಿದುಬಂದಿದೆ. ಇದು ಬಹುವಾರ್ಷಿಕ ಬೆಳೆಯಾದ್ದರಿಂದ ಕೀಟಗಳ ಉಪದ್ರವ ವರ್ಷವಿಡೀ ಕಂಡುಬರುತ್ತದೆ.

**೧. ಆನೆಕೊಂಬಿನ ದುಂಬಿ** (ಸಿರಿಕ್‌ಟೆಸ್ ರೈನಾಸಿರಸ್): ಇದು ತೆಂಗಿಗೆ ಬಹು ಉಪದ್ರವಕಾರೀ ಕಿಟ. ವಯಸ್ಕ ಹುಳುಗಳು ಸುಳಿಯ ಎಲೆಗಳ ಬುಡವನ್ನು ಕೊರೆದು ತಿನ್ನುವುದರಿಂದ ಗಿಡದ ಬೆಳವಣಿಗೆ ಕುಂಠಿತವಾಗಿ ಕೆಲ ಸಮಯ ಗಿಡಗಳು ಸಾಯಬಹುದು. ಹುಳುವು ಪ್ರಪಂಚದ ತೆಂಗು ಬೆಳೆಯುವ ಎಲ್ಲಾ ಪ್ರದೇಶದಲ್ಲೂ ಕಂಡುಬರುತ್ತದೆ. ಅಡಕೆ, ಈಚಲು, ಭಗನಿ, ತಾಳೆ ಗಿಡಗಳಲ್ಲೂ ಇದು ವೃದ್ಧಿಯಾಗಬಲ್ಲದು. ಜೀರುಂಡೆ ಸಾಮಾನ್ಯವಾಗಿ ಹೆಚ್ಚಿನ ಸಾವಯವ ಪದಾರ್ಥ ಸಿಗುವೆಡೆ ಮುಖ್ಯವಾಗಿ ಗೊಬ್ಬರದ ಗುಂಡಿಗಳಲ್ಲಿ ಮೊಟ್ಟೆಯಿಡುತ್ತದೆ. ಬೆಳ್ಳಗೆ ಗುಂಡಗಿರುವ ಮರಿಹುಳು ಸುಮಾರು ೧–೧ ೧/೨ ಅಂಗುಲ ಉದ್ದ ಬೆಳೆಯುತ್ತವೆ. ಅದರ

ದವಡೆಯಲ್ಲಿ ಗಟ್ಟಿಯಾದ ಒಂದು ಜೊತೆ ಕೊಂಡಿಯಿದ್ದು, ಮೈ ಮೇಲೆಲ್ಲಾ ಕಂದು ಬಣ್ಣದ ಕೂದಲುಗಳಿರುತ್ತವೆ. ಜೀರುಂಡೆ ಕಪ್ಪಗಿದ್ದು ೧–೧ ೧/೨ ಅಂಗುಲ ಉದ್ದವಿರುತ್ತವೆ. ತಲೆ ಸಣ್ಣಗಿದ್ದು ಅದರ ಮೇಲೆ ಗಟ್ಟಿಯಾದ ಒಂದು ಕೊಂಬಿರುತ್ತದೆ. ಅವಕ್ಕೆ ಬಲವಾದ ರೆಕ್ಕೆಯಿದ್ದು ಹಾರಲು ಅನುಕೂಲವಾಗಿದೆ. ಜೀರುಂಡೆಗಳು ತಮ್ಮ ಗಟ್ಟಿಯಾದ ಕೊಂಡಿಗಳಿಂದ ಮರದ ಸುಳಿಯನ್ನು ಕೊರೆದು ಒಳಗೆ ಸೇರಿ ತಿನ್ನುವುದರಿಂದ ಸುಳಿಯ ಎಲೆಗಳು ಸರಿಯಾಗಿ ಬೆಳೆಯುವುದಿಲ್ಲ. ಹಾಗೇ ಬಿಟ್ಟಲ್ಲಿ ಅದರ ಕೊರೆತದಿಂದ ಸುಳಿ ಪೂರ್ಣ ನಾಶವಾಗಬಹುದು. ಕಬ್ಬಿಣದ ಕೊಂಡಿಯಿಂದ ತೂತಿನೊಳಗಿರುವ ಜೀರುಂಡೆಯನ್ನು ಚುಚ್ಚಿ ತೆಗೆದು ನಾಶಪಡಿಸಬೇಕು. ತೂತಿಗೆ ಮರಳು ಅಥವಾ ಬಿ.ಎಚ್.ಸಿ. ಪುಡಿ ಮಿಶ್ರಿತ ಮರಳನ್ನು ತುಂಬಬೇಕು. ಆಗ್ಗಾಗ್ಗೆ ಈ ಕೆಲಸ ಮಾಡಲೇಬೇಕು. ಕೆಲವು ಪರೋಪಜೀವಿಗಳನ್ನು ಅಲ್ಲಿ ಸಾಕಿಬಿಡುವುದರಿಂದಲೂ ಅವನ್ನು ನಾಶಪಡಿಸಬಹುದು. "ಗೊಬ್ಬರದ ಹುಳು" ಎಂದು ಹೆಸರಾಂತ ಅದರ ಮರಿಗಳು ಗೊಬ್ಬರದ ಗುಂಡಿಗಳಲ್ಲಿ ಬೆಳೆಯುವುದರಿಂದ ಗುಂಡಿಗಳಲ್ಲಿ ಗೊಬ್ಬರ ತುಂಬುವಾಗ ಪ್ರತಿ ಪದರಕ್ಕೂ ಬಿ. ಎಚ್.ಸಿ. ಪುಡಿಯನ್ನು ಎರಚುವುದರಿಂದ ಆ ಮರಿಹುಳಗಳನ್ನು ನಾಶಪಡಿಸಬಹುದು.

**೨. ಗೊಣ್ಣೇ ಹುಳು :** (ಲೂಕೊಫೋಲೀಸ್ ಕೋನಿಯೋಫ್ಲೋರ): ಇವು ಕೆಲವು ಜಾತಿಯ ಜೀರುಂಡೆಯ ಮರಿಗಳು. ಇವು ತೆಂಗಿನ ಮರದ ಬುಡದಲ್ಲಿ ವೃದ್ಧಿಸಿ ಬೇರುಗಳನ್ನು ತಿನ್ನುವುದರಿಂದ ಮರಕ್ಕೆ ಧಕ್ಕೆಯಾಗುತ್ತದೆ. ಮರದ ಬೆಳವಣಿಗೆ ಕುಂಠಿತವಾಗಿ ಎಳೇಕಾಯಿಗಳು ಉದುರುತ್ತವೆ. ತಾಯಿ ಹುಳು ಸ್ವಲ್ಪ ಕಂದುಬಣ್ಣದವಾಗಿದ್ದು ಅದರ ಮರಿಗಳು "ಗೊಣ್ಣೇ ಹುಳು" ಅಥವಾ ಗೊಬ್ಬರದ ಹುಳು ಎಂದು ಕರೆಯಲ್ಪಡುತ್ತದೆ. ಬೆಳ್ಳಗೆ, ದುಂಡಗೆ,

ಕೊಂಡಿಯಾಕಾರದಲ್ಲಿರುವ ಆ ಹುಳುಗಳಿಗೆ ಗಟ್ಟಿಯಾದ ಕೊಂಡಿಗಳಿದ್ದು ಬೇರನ್ನು ಕಡಿದು ತಿನ್ನಲು ಅನುಕೂಲವಾಗಿದೆ. ಮರದ ಬುಡದ ಸುತ್ತಲೂ ಅಗೆದು ಬಿಟ್ಟಲ್ಲಿ ಹುಳು ಮೇಲೆ ಬಂದು ಹಕ್ಕಿಗಳಿಂದ ತಿನ್ನಲ್ಪಡುತ್ತವೆ. ಬಿ.ಎಚ್.ಸಿ. ಡಿ.ಡಿ.ಟಿ. ಅಥವಾ ಕ್ಲೋರ್‌ಡೇನ್ ಪುಡಿಯನ್ನು ಭೂಮಿಗೆ ಹರಡಿ ಅಗೆದುಬಿಡುವುದರಿಂದಲೂ, ಹೆಪ್ಟಾಕ್ಲೋರ್, ಎಕಾಟಿನ್ ಅಥವಾ ಆಲ್ಡ್ರಿನ್ ದ್ರಾವಣವನ್ನು ಮರದ ಸುತ್ತಲೂ ಹಾಯಿಸುವುದರಿಂದಲೂ ಅವನ್ನು ನಾಶಪಡಿಸಬಹುದು.

**೩: ಮೂತಿ ಹುಳುಗಳು :** (ಡೈಕೊಲ್ಯಾಂಡ್ರ, ರಿನ್‌ಕೋಫೋರಿಸ್ ಜಾತಿಗಳು): ಇವು ಎಳೇ ಸಸಿಗಳಿಗೆ ಬಹು ಉಪದ್ರವಕಾರಿ. ಇವುಗಳಲ್ಲಿ ೫–೬ ಜಾತಿಯಿವೆ. ಬಲಿತ ಮರಗಳಿಗೆ ಇವುಗಳಿಂದ ನೇರ ತೊಂದರೆಯಾಗದಿದ್ದರೂ ಅವು ತೊಗಟೆಯ ಕೆಳಗೆ ಮೊಟ್ಟೆಯಿಟ್ಟು, ಅದರ ಮರಿಗಳು ಮರದ ಭಾಗವನ್ನು ಕೊರೆದು ತಿನ್ನುವುದರಿಂದ ಮರಕ್ಕೆ ನಷ್ಟವಾಗುತ್ತದೆ. ಶೇ. ೧ ಭಾಗದ ಪೈರೊಕಾನ್–೩ ದ್ರಾವಣವನ್ನು ಮರದೊಳಕ್ಕೆ ಅಲ್ಲಲ್ಲಿ ರಂಧ್ರಮಾಡಿ ಸುರಿಯುವುದರಿಂದ ಇವನ್ನು ನಾಶಪಡಿಸಬಹುದು. ಎಲೆಗಳ ಕೋನಗಳಲ್ಲಿ ಬಿ.ಎಚ್.ಸಿ. ಪುಡಿ ಮಿಶ್ರಿತ ಮರಳನ್ನು ತುಂಬುವುದರಿಂದ ಹುಳುಗಳನ್ನು ನಾಶಪಡಿಸಬಹುದು.

**೪. ತೆಂಗಿನ ಪತಂಗಹುಳು** (ನೆಫೇನ್‌ಟಿಸ್ ಸೆರಿನೋಪ): ಇದು ತೆಂಗಿನ ಎಲೆಗಳಿಗೆ ಉಪದ್ರವಕಾರಿ. ಹುಳುಗಳು ಗುಂಪುಗುಂಪಾಗಿ ಎಲೆಗಳ ತಳಭಾಗದಲ್ಲಿದ್ದು, ಎಲೆಯನ್ನು ಕೊರೆದು ತಿನ್ನುವುದರಿಂದ ಎಲೆಗಳು ಒಣಗಿ, ಗಿಡವು ಬೆಳೆಯದೆ ಇಳುವರಿ ಕಡಮೆಯಾಗುತ್ತದೆ. ಹುಳುಗಳು ಸೂಕ್ಷ್ಮ ಎಳೆಯ ದಾರಗಳಿಂದ ಮುಚ್ಚಲ್ಪಟ್ಟದ್ದು ಅವನ್ನು ಕೊಲ್ಲುವುದು ಸುಲಭವಲ್ಲ. ಹೆಚ್ಚಾಗಿ

ಹುಳುಗಳಿರುವ ಎಲೆಗಳನ್ನು ಕತ್ತರಿಸಿ ಸುಡಬೇಕು. ಅನೇಕ ಪರೋಪ ಜೀವಿಗಳಿಂದ ಇವನ್ನು ನಾಶಪಡಿಸಬಹುದು. ಶೇ. ೦.೨ ಭಾಗದ ಡಿ.ಡಿ.ಟಿ. ಅಥವಾ ಬಿ.ಎಚ್.ಸಿ. ಎಲೆಯ ಅಡಿಭಾಗದಲ್ಲೆಲ್ಲಾ ಚೆನ್ನಾಗಿ ಹರಡುವಂತೆ ಸಿಂಪಡಿಸುವುದರಿಂದ ಅದನ್ನು ನಾಶಪಡಿಸ ಬಹುದು.

**೫. ಇತರ ಪತಂಗ ಮತ್ತು ನೊಣಗಳು :** ತೆಂಗಿನ ಎಲೆ ಗಳನ್ನು ತಿನ್ನುವ ಮರಿಗಳನ್ನು ಉತ್ಪನ್ನಮಾಡುವ ಅನೇಕ ಪತಂಗ ಗಳೂ, ನೊಣಗಳೂ ಅಲ್ಲಲ್ಲಿ ಪ್ರಬಲವಾಗಿವೆ. ಇವೆಲ್ಲವನ್ನೂ ಶೇ. ೦.೨ ಡಿ.ಡಿ.ಟಿ. ಅಥವಾ ಬಿ.ಎಚ್.ಸಿ. ಪುಡಿಗಳನ್ನು ಎಲೆಯ ತಳಭಾಗವೆಲ್ಲಾ ಮುಚ್ಚುವಂತೆ ಎರಚುವುದರಿಂದ ನಾಶಗೊಳಿಸ ಬಹುದು.

**೬. ಗೆದ್ದಲು** (ಒಡೋನ್ ಟೋ ಟರ್ಮಿಸ್ ಒಬೇಸಸ್): ಎಳೇ ಸಸಿಗಳಿಗೆ ಗೆದ್ದಲಿನ ಹಾವಳಿ ಹೆಚ್ಚು. ಅವು ಬಹುಶಃ ಒಣ ಗಿದ, ಕಾಯಿಯ ಜುಂಗಿನಿಂದ ಆಕರ್ಷಿಸಲ್ಪಡುವುವೆಂದು ಕಾಣು ತ್ತದೆ. ನೆಟ್ಟಮೇಲೂ ಇದರ ಉಪದ್ರವವಿದೆ. ಕೆಲವು ವೇಳೆ ಹಳೆಯ ಮರಗಳ ಕಾಂಡದ ಮೇಲೂ ಇವು ಹರಡಿ ತುದಿಯಲ್ಲಿನ ಒಣಎಲೆ ಬುಡ, ಜುಂಗುಗಳನ್ನೆಲ್ಲಾ ಆವರಿಸಿ ತಿನ್ನುತ್ತವೆ. ಮಡಗಾಸ್ಕರಿನಲ್ಲಿ ಮರದ ತಳದಲ್ಲೇ 'ಬುಗ್ಗೆ' ಉತ್ಪನ್ನಮಾಡಿ ಮರದ ಒಳಗಿನಿಂದಲೇ ಹಬ್ಬಿ ನಾಶಪಡಿಸುವುದು ವರದಿಯಾಗಿದೆ. ಪಾತಿಗಳಲ್ಲಿ ಸಸಿಗಳ ಸುತ್ತಲೂ ಮರಳು ತುಂಬಿದಲ್ಲಿ ಗೆದ್ದಲು ಹಾವಳಿ ಕಡಮೆಯಾಗು ತ್ತದೆ. ಸಸಿ ನೆಟ್ಟಾಗ ಸುತ್ತಲೂ ಕ್ಲೋರ್‌ಡೇನ್, ಬಿ.ಎಚ್.ಸಿ. ಅಥವಾ ಡಿ.ಡಿ.ಟಿ. ಪುಡಿಗಳನ್ನು ಎರಚುವುದರಿಂದ ಅವುಗಳನ್ನು ಬಹುವಾಗಿ ತಡೆಗಟ್ಟಬಹುದು. ನೀರನ್ನು ಹೆಚ್ಚಾಗಿ ಹಾಯಿಸು ತ್ತಿದ್ದಲ್ಲಿ ಗೆದ್ದಲು ಹತ್ತುವುದಿಲ್ಲ. ಹೆಪ್ಟಾಕ್ಲೋರ್ ಅಥವಾ

ಆಲ್ಡ್ರಿನ್ ದ್ರಾವಕಗಳನ್ನು ಹುತ್ತಗಳಿಗೆ ಸುರಿದು ಮುಚ್ಚಿದಲ್ಲಿ ಅವು ಬಹುವಾಗಿ ಸಾಯುತ್ತವೆ.

**೭. ಕೆಂಧಿರುವೆ** (ಈಕೋಫಿಲ್ಲಾ ಸ್ಮಾರಾಗ್ಡೈನಾ): ಇದು ಎಲ್ಲಾ ತೆಂಗಿನ ಪ್ರದೇಶದಲ್ಲೂ ಕಂಡುಬರುತ್ತದೆ. ಇರುವೆಗಳು ಎಲೆಗಳ ಮಧ್ಯೆ ದಪ್ಪಗೂಡು ಕಟ್ಟುತ್ತವೆ. ಚಿಪ್ಪಿನಹುಳು ಶಲ್ಯಕೀಟಗಳಿರುವ ಮರಗಳಲ್ಲಿ ಇವು ಹೆಚ್ಚು. ಶಲ್ಯಕೀಟಗಳು ಹೀರಿ ವಿಸರ್ಜಿಸುವ ಒಂದು ಬಗೆಯ ಜೇನನ್ನು ಸವಿಯುವ ಈ ಇರುವೆಗಳು ಅವುಗಳನ್ನು ಬೇರೆಡೆಯಿಂದ ತಂದು ತಮ್ಮ ಗೂಡಿನ ಬಳಿ ಶೇಖರಿಸುತ್ತವೆ. ಶಲ್ಯಕೀಟಗಳು ರಸಹೀರುವುದರಿಂದ ಕಾಯಿ ಉದುರುತ್ತವೆ. ಅಲ್ಲದೆ ಮರಗಳನ್ನು ಹತ್ತಲೂ ಇರುವೆಗಳಿಂದ ಹೆಚ್ಚಿನ ತೊಂದರೆಯಾಗುತ್ತದೆ. ಮರದ ಮೇಲಿರಬಹುದಾದ ಕೆಲವು ಜಾತಿಯ ಹುಳುಗಳನ್ನು ಅವು ತಿನ್ನುವುದರಿಂದ ಸ್ವಲ್ಪ ಅನುಕೂಲವಿದ್ದರೂ, ತೊಂದರೆಯೇ ಹೆಚ್ಚು. ಅವುಗಳ ಗೂಡನ್ನು ರಾತ್ರಿ ವೇಳೆ ಬೆಂಕಿ ಹಚ್ಚಿ ಸುಡಬೇಕು. ಮರದ ಕಾಂಡದ ಮೇಲೆಲ್ಲಾ ಬಿ.ಎಚ್.ಸಿ. ಪುಡಿಯನ್ನು ಎರಚುವುದರಿಂದಲೂ, ಪ್ಯಾರಥಿಯಾನ್ ಕ್ಲೋರ್‌ಡೇನ್ ಅಥವಾ ಆಲ್‌ಡ್ರಿನ್ ಸಿಂಪಡಿಸುವುದರಿಂದಲೂ ಅವನ್ನು ನಾಶಗೊಳಿಸಬಹುದು.

**೮. ಇಲಿಗಳು** (ರಾಟಸ್ ರಾಟಸ್): ತೆಂಗಿಗೆ ಇಲಿ ಮುಖ್ಯ ಶತ್ರು. ಕೆಲವೆಡೆ ಶೇ. ೪೦–೫೦ರಷ್ಟು ನಷ್ಟವುಂಟುಮಾಡುತ್ತದೆ. ಅವು ಮರದ ತುದಿಯಲ್ಲೇ ಗೂಡುಮಾಡಿಕೊಂಡು ಸಂಸಾರ ಸಮೇತ ವಾಸವಿದ್ದು, ಫಸಲನ್ನು ನಾಶಪಡಿಸುತ್ತವೆ. ಇವುಗಳನ್ನು ಅನೇಕ ವಿಧದಲ್ಲಿ ಹಿಡಿದು ಕೊಲ್ಲುವುದರಿಂದಲೂ, ಜಿಂಕ್ ಫಾಸ್ಫೈಡ್ ಮೊದಲಾದ ಇಲಿ ಪಾಷಾಣಗಳಿಂದಲೂ, ಬಿಲಗಳಿಗೆ ಸಯನೋಗ್ಯಾಸ್ ಉಪಯೋಗಿಸುವುದರಿಂದಲೂ ನಾಶಪಡಿಸ

ಬಹುದು. ಕೆಳಕ್ಕೆ ಇಳಿಜಾರಾಗಿರುವ ತೆಳುವಾದ ನಯ ತಗಡನ್ನು ಮರದ ಸುತ್ತಲೂ ಕಟ್ಟುವುದರಿಂದಲೂ, ಸುತ್ತುವುದರಿಂದಲೂ, ಇಲಿ ಮೇಲೆ ಹತ್ತದಂತೆ ತಡೆಗಟ್ಟಬಹುದು.

೯. **ಬಾವಲಿಗಳು** (ಟೇರೋಪಸ್ ಎಡ್‌ವರ್ಡ್ಸ್ಸೆ) : ಬೇರೆ ಹಣ್ಣುಹಂಪಲು ಸಿಗದಿದ್ದಾಗ ಬಾವಲಿಗಳು ತೆಂಗಿನಕಾಯನ್ನು ಮುತ್ತುತ್ತವೆ. ದೊಡ್ಡಮರಗಳ ಗೊಂಚಲು ಪಕ್ಕಕ್ಕೆ ಜೋತು ಬಿದ್ದು, ಕಾಯಿಗಳಲ್ಲಿ ೧೧/೨-೨ ಅಂಗುಲ ಅಗಲದ ತೂತು ಕೊರೆದು, ಮೊದಲು ನೀರುಕುಡಿದು, ತಿರುಳನ್ನು ತಿನ್ನುತ್ತವೆ. ಇದರಿಂದ ಕೆಲವು ವೇಳೆ ಶೇ. ೫ರಿಂದ ೬ರಷ್ಟು ಫಸಲಿನ ನಷ್ಟವಾಗ ಬಹುದು. ಅವುಗಳನ್ನು ಗುಂಡಿಕ್ಕಿ ಕೊಲ್ಲುವುದೇ ಮುಖ್ಯಮಾರ್ಗ.

೧೦. **ಕೊಬ್ಬರಿಗೆ ಬೀಳುವ ಕೀಟಗಳು :** ದಾಸ್ತಾನು ಮಾಡಲ್ಪಟ್ಟಿರುವ ಕೊಬ್ಬರಿಗೆ ಅನೇಕ ಕೀಟಗಳಿಂದ ತೊಂದರೆಯಿದೆ. ಇದರಿಂದ ಕೊಬ್ಬರಿಯ ಘನತೆ ಮತ್ತು ಎಣ್ಣೆಯ ಅಂಶ ಕಡಮೆಯಾಗುತ್ತದೆ. ಕಾರ್‌ಪೋಫಿಲಸ್, ನೆಕ್ರೋಬಿಯ, ಟ್ರೈಲೋಬಿಯಂ ಮುಂತಾದ ಸಣ್ಣ ಜೀರುಂಡೆಗಳಿಂದಲೇ ಇವಕ್ಕೆ ನಷ್ಟ ಹೆಚ್ಚು. ಇವು ಗೋದಾಮಿನ ಗೋಡೆ ಸಂಧಿಗಳಲ್ಲೂ, ಚೀಲಗಳಲ್ಲೂ ಸೇರಿದ್ದು ಹಬ್ಬಿ ನಷ್ಟಪಡಿಸುತ್ತವೆ. ಹೊಸ ಚೀಲಗಳನ್ನು ಉಪಯೋಗಿಸುವುದರಿಂದಲೂ, ಹಳೇ ಚೀಲಗಳ ಉಪಯೋಗಕ್ಕೆ ಮುನ್ನ ಡಿ.ಡಿ.ಟಿ., ಬಿ.ಎಚ್.ಸಿ. ಮೊದಲಾದ ದ್ರಾವಣಗಳಲ್ಲಿ ನೆನೆಹಾಕಿ ಒಣಗಿಸುವುದರಿಂದಲೂ, ಗೋದಾಮುಗಳಿಗೆ ಕ್ರಿಮಿನಾಶಕ ಔಷದ ಸಿಂಪಡಿಸುವುದರಿಂದಲೂ, ಕ್ರಿಮಿನಾಶಕ ಹೊಗೆ ಉಪಯೋಗದಿಂದಲೂ ನಾಶ ಪಡಿಸಬೇಕು. ಅರೆ ಒಣಗಿ ಬೂಜು ಬರಬಹುದಾದ ಕೊಬ್ಬರಿಗೆ ಈ ಹುಳುಗಳ ಹಾವಳಿ ಹೆಚ್ಚಾಗಿರುವುದರಿಂದ, ಕೊಬ್ಬರಿಯನ್ನು ಚೆನ್ನಾಗಿ

ಒಣಗಿಸಬೇಕು. ಇದರಿಂದ ಈ ಕೀಟಗಳ ಹಾವಳಿ ಕಡಮೆಯಾಗುತ್ತದೆ.

## ರಸ ತೆಗೆಯುವಿಕೆ

'ಮರ ಕಟ್ಟುವುದೆಂದು' ಕರೆಯಲ್ಪಡುವ ಈ ವಿಧಾನದಿಂದ ತೆಂಗಿನ ಮತ್ತು ಅದಕ್ಕೆ ಸಂಬಂಧಿಸಿದ ಇತರ ಮರಗಳ ನಿರ್ದಿಷ್ಟ ಭಾಗಗಳಿಂದ ರಸವನ್ನು ತೆಗೆಯುವುದೇ ಆಗಿದೆ. ಈಚಲ ಮರದ ಸುಳಿಯ ಬಳಿ ಚೆನ್ನಾಗಿ ಕೊರೆದು ತೂತುಮಾಡಿ ಅದರಿಂದ ರಸ ಬರುವಂತೆ ಮಾಡಲಾಗುತ್ತದೆ. ತಾಳೆ ಭಗನಿ ಮತ್ತು ತೆಂಗುಗಳಲ್ಲಿ ಎಳೆಯ ಹೊಂಬಾಳೆಗಳಿಂದ ರಸ ಬರುವಂತೆ ಮಾಡುತ್ತಾರೆ. ಈ ರಸ ಬಹು ಸಿಹಿಯಾಗಿದ್ದು ಬಸಿಲೇರಿದಂತೆ ಹುಳಿಯಾಗಿ ಹೆಂಡವಾಗುತ್ತದೆ. ಸಿಹಿಯಾದ ರಸಕ್ಕೆ "ನೀರಾ" ಎಂದು ಹೆಸರು.

ತಾಳೆ, ಈಚಲು, ಭಗನಿ, ಹೆಂಡ ತೆಗೆಯಲು ಉಪಯುಕ್ತವಾಗಿವೆ. ತೆಂಗಿನ ಮರಗಳಿಂದ ಭಾರತದಲ್ಲಿ ಹೆಂಡ ತೆಗೆಯಲು ಅಷ್ಟು ಪ್ರಾಮುಖ್ಯತೆ ಕೊಟ್ಟಿಲ್ಲ. ಇಲ್ಲಿ ಅದರ ಕಾಯಿಗೆ ಪ್ರಾಮುಖ್ಯತೆ ಹೆಚ್ಚು. ಕೆಲವೊಮ್ಮೆ ಮಾತ್ರ ರಸತೆಗೆಯಲು ಉಪಯುಕ್ತವಾಗುತ್ತದೆ. ಹೊಂಬಾಳೆ ಹೊರಟು ಅದರಲ್ಲಿನ ಹೂಗಳೆಲ್ಲಾ ಬಲಿಯುವುದಕ್ಕೆ ಮುಂಚೆ ರಸ ತೆಗೆಯಬೇಕು. ತೆಂಗಿನ ಹೆಂಡ ಇತರ ಮರದ ಹೆಂಡಕ್ಕಿಂತ ರುಚಿ ಹೆಚ್ಚು.

ಹೊಸತಾಗಿ ಸಂಗ್ರಹವಾದ ರಸ ಸಿಹಿಯಾಗಿದ್ದು, ಅದನ್ನು ಕುದಿಸಿ ಅದರಿಂದ ಉತ್ತಮ ಬೆಲ್ಲ ತಯಾರಿಸಬಹುದು. ಹುಳಿಯಾದ ಹೆಂಡದಿಂದ 'ವಿನಿಗರ್' ಎಂಬ ಹುಳಿಯನ್ನೂ, ಸಾರಾಯಿ

ಯನ್ನೂ ತಯಾರಿಸಬಹುದು. ತೆಂಗಿನ ಹೆಂಡವನ್ನು ಅತಿಯಾಗಿ ಸೇವಿಸಿದಲ್ಲಿ, ಬುದ್ಧಿ ಕಡಮೆಯಾಗಿ, ಮೈಊದಿ, ಹಸಿವು ಹಾಳಾಗಿ ಖಾಯಿಲೆಗಳು ಬೇಗಬರುತ್ತವೆ.

ಗಿಡದಿಂದ ರಸವನ್ನು ಯಾವ ತಿಂಗಳಲ್ಲಾದರೂ ತೆಗೆಯಲು ಪ್ರಾರಂಭಿಸಿ ವರ್ಷವಿಡೀ ತೆಗೆಯಬಹುದು. ಆದರೆ ಕೆಲವು ತಿಂಗಳಲ್ಲಿ ಮುಖ್ಯವಾಗಿ ಮಳೆಗಾಲದಲ್ಲಿ ಹೆಚ್ಚು ರಸ ಉತ್ಪತ್ತಿಯಾಗುವುದು. ಭಾರತದ ಪಶ್ಚಿಮ ತೀರ ಪ್ರದೇಶಗಳಲ್ಲಿ ಮಳೆಗಾಲದಲ್ಲಿ ಮಾತ್ರ, ಅಂದರೆ ವರ್ಷಕ್ಕೆ ೬ ತಿಂಗಳು ರಸ ತೆಗೆಯುತ್ತಾರೆ. ಸಾಕಷ್ಟು ತೇವ ವಿಲ್ಲದ ಬೇಸಿಗೆಯಲ್ಲಿ ರಸ ತೆಗೆದಲ್ಲಿ ಗಿಡಕ್ಕೆ ತೊಂದರೆಯಾಗಿ ಬೆಳೆ ವಣಿಗೆ ಕುಗ್ಗುತ್ತದೆ. ಒಳ್ಳೆಯ ಭೂಗುಣವಿದ್ದು ನೀರು ಸಮಂಜಸ ವಾಗಿರುವಲ್ಲಿ ಎರಡು ವರ್ಷಗಳವರೆಗೂ ಸತತವಾಗಿ ತೆಗೆಯಲಾಗು ತ್ತದೆ. ಸಿಂಹಳ, ಫಿಲಿಫೈನ್ಸ್ ದ್ವೀಪಗಳಲ್ಲಿ ಅನೇಕ ವರ್ಷ ಬಿಡದೆ ರಸ ತೆಗೆಯುತ್ತಾರೆ. ಕೆಲವು ತೋಟಗಳನ್ನು ಅದರ ಜೀವನವಿಡೀ ರಸ ತೆಗೆಯಲು ಆ ದೇಶಗಳಲ್ಲಿ ಮೀಸಲಿಡುತ್ತಾರೆ.

ಹೊಂಬಾಳೆಯ ತಳಭಾಗದಲ್ಲಿ ಹೆಣ್ಣು ಹೂಗಳು ಬಲಿಯ ತೊಡಗಿ ಅದರ ಬುಡ ಸ್ವಲ್ಪ ದಪ್ಪವಾದಾಗ ಅದರಿಂದ ರಸ ತೆಗೆಯ ಬೇಕು. ಅದರ ಸರಿಯಾದ ಅಂತರವನ್ನು, ಮರದ ವಯಸ್ಸು ಮತ್ತು ಬೆಳೆವಣಿಗೆಯ ಆಧಾರದ ಮೇಲೆ, ನುರಿತ ಉತಾರುದಾರ ನಿರ್ಧರಿಸ ಬಲ್ಲ. ಹೊಂಬಾಳೆಯ ತಳಭಾಗದ ಮುಕ್ಕಾಲು ಭಾಗವನ್ನು ತೆಂಗಿನ ನಾರಿನಿಂದ ಬಿಗಿದು, ಅದನ್ನು ಬೆಳಿಗ್ಗೆ ಸಂಜೆ ಮೃದುವಾಗಿ ತಟ್ಟು ತ್ತಿರಬೇಕು. ಸುಮಾರು ೬–೭ ದಿನ ಹೀಗೆ ತಟ್ಟುತ್ತಿದ್ದು, ನಂತರ ಅದರ ತುದಿಯನ್ನು (ಸುಮಾರು ೩–೪ ಅಂಗುಲದಷ್ಟು) ಕೊಯ್ದು, ಎಲೆಯ ಚೂರೊಂದನ್ನು ಅದರ ತಳದಲ್ಲಿ ವಾಲಿದಂತೆ ಸಿಕ್ಕಿಸುತ್ತಾರೆ. ಮುಂದೆಯೂ ದಿನವೂ ಅದನ್ನು ತಟ್ಟುತ್ತಿದ್ದಲ್ಲಿ ಗಾಯದಿಂದ ರಸ

ಬರಲು ಪ್ರಾರಂಭವಾಗುತ್ತದೆ. ಗಾಯ ಮಾಸಿದಲ್ಲಿ ರಸಸೋರು
ವುದು ಕಡಮೆಯಾಗುವುದರಿಂದ ದಿನಕ್ಕೆ ೨-೩ ಸಲ ತೆಳ್ಳನೆಯ
ಪದರವನ್ನು ಒರೆದು ಹೊಸ ಗಾಯಮಾಡುತ್ತಾರೆ. ಹೊಂಬಾಳೆಯ
ಅಡಿಯಲ್ಲಿ ಅದರಿಂದ ಸೋರುವ ರಸವನ್ನು ಶೇಖರಿಸಲು ಮಣ್ಣಿನ
ಗಡಿಗೆಯನ್ನು ಕಟ್ಟಲಾಗುತ್ತದೆ. ರಸ ತೆಗೆಯುವ ಏರ್ಪಾಟಾದಂದಿ
ನಿಂದ ರಸ ಚೆನ್ನಾಗಿ ಬರಲು ೧೦ರಿಂದ ೨೫ ದಿನ ಬೇಕಾಗುತ್ತದೆ.
ಈ ಅವಧಿ ಗಿಡದ ದಾರ್ಢ್ಯತೆ, ಋತುಲಕ್ಷಣ ಮತ್ತು ಉತಾರು
ದಾರನ ಚಾಕಚಕ್ಯತೆಯನ್ನವಲಂಭಿಸಿದೆ. ಮಡಿಕೆಯಲ್ಲಿ ಶೇಖರವಾದ
ಹೆಂಡ ಹೊಂಬಾಳೆಯ ಹೂಗಳನ್ನು ಕೊಳೆಸದಂತೆ ಹೊಂಬಾಳೆಯ
ತಳಭಾಗದುದ್ದಕ್ಕೂ ಸೀಳಿಬಿಡಬೇಕು. ಆಗ ಒಳಹೊಕ್ಕ ಹೆಂಡ
ಹೊರಹರಿದು ತೊಟ್ಟೆಕ್ಕಿ ಒಳಗೆ ನಿಲ್ಲುವುದಿಲ್ಲ.

ರಸವನ್ನು ಬೆಳಗ್ಗೆ ಸಂಜೆ ಶೇಖರಿಸಲಾಗುತ್ತದೆ. ಬೆಲ್ಲಕ್ಕೆ ಬೇಕಾ
ಗುವ ನೀರಾವನ್ನು ಮಾತ್ರ ಮುಂಜಾನೆ ಶೇಖರಿಸುತ್ತಾರೆ. ರಸ
ಪ್ರಮಾಣದಲ್ಲಿ ಋತು ವ್ಯತ್ಯಾಸವನ್ನನುಸರಿಸಿ, ದಿನದಿಂದ ದಿನಕ್ಕೆ
ಮರದಿಂದ ಮರಕ್ಕೆ, ಹೊಂಬಾಳೆಯಿಂದ ಹೊಂಬಾಳೆಗೆ ವ್ಯತ್ಯಾಸ
ಏದೆ. ಬೇಸಗೆಯಲ್ಲಿ ರಸ ಕಡಮೆ. ಮಳೆಗಾಲದಲ್ಲಿ ಹೆಚ್ಚು. ಮೊದ
ಮೊದಲು ರಸ ಕಡಮೆಯಾಗಿ ಪ್ರಾರಂಭವಾಗಿ ಹೆಣ್ಣು ಹೂಗಳಿರುವ
ಹೊಂಬಾಳೆಯ ತಳಭಾಗದತ್ತ ಬಂದಾಗ ಹೆಚ್ಚುತ್ತದೆ. ಸಿಂಹಳದಲ್ಲಿ
ದಿನಕ್ಕೆ ಒಂದೇ ಸಲ ತೆಗೆದಾಗ ೧-೨ ಲೀಟರ್‌ಗಳಷ್ಟೂ, ಎರಡು
ಸಲಕ್ಕೆ ೪-೮ ಲೀಟರ್‌ಗಳಷ್ಟೂ ಒಂದೇ ಮರದಿಂದ ದೊರಕಿರುವುದು
ತಿಳಿದುಬಂದಿದೆ. ಮಲಯಾದಲ್ಲಿ ದಿನ ಒಂದಕ್ಕೆ ೨.೧ ಲೀಟರ್
ರಸ ದೊರಕುತ್ತದೆ. ಗುಜ್ಜ ಗಿಡಗಳಲ್ಲಿ ಹೆಚ್ಚಿನ ಮತ್ತು ರುಚಿಕರವಾದ
ರಸ ದೊರಕುತ್ತದೆ. ಭಾರತದಲ್ಲಿ ಸರಾಸರಿಯಾಗಿ ಪ್ರತಿ ಮರದಿಂದ
ದಿನ ಒಂದಕ್ಕೆ ೧.೬ ಲೀಟರ್ ರಸ ದೊರೆಯುತ್ತದೆ.

ಸಾಮಾನ್ಯವಾಗಿ ಪ್ರತಿ ಸಲ ೬ ತಿಂಗಳಿಗೆ ಮೇಲ್ಪಟ್ಟು ರಸ ತೆಗೆಯುವುದು ಮುಂದಿನ ಇಳುವರಿಯ ದೃಷ್ಟಿಯಿಂದ ಒಳಿತಲ್ಲ. ಕ್ರಮವರಿತು ರಸ ತೆಗೆಯುವುದರಿಂದ ಗಿಡಕ್ಕೆ ಎಂದಿಗೂ ಕೆಡಕಾಗುವುದಿಲ್ಲ. ಅದರಿಂದ ಉತ್ತಮ ಉತ್ಪತ್ತಿಯಾಯುವ ಮರಗಳಿಗೆ ಅನುಕೂಲವಾಗದಿದ್ದರೂ ಕಡಮೆ ಉತ್ಪತ್ತಿಯಾಗುವ ಮರಗಳಲ್ಲಿ ಉತ್ಪತ್ತಿ ಹೆಚ್ಚುವುದು ಕಂಡುಬಂದಿದೆ. ಆದ್ದರಿಂದ ಆಗಾಗ್ಗೆ ರಸ ತೆಗೆಯುವುದು ಉತ್ತಮ.

## ತೆಂಗಿನ ಉತ್ಪತ್ತಿಯ ಬಳಕೆ

ತೆಂಗಿನ ಮರದ ಪ್ರತಿಯೊಂದು ಭಾಗವೂ ಉಪಯುಕ್ತವಾದದ್ದು. ಕಾಯಿ, ಜುಂಗು, ಚಿಪ್ಪು, ಹೊಂಬಾಳೆ, ಎಲೆ ಮತ್ತು ಮರದ ವಿವಿಧ ಉತ್ಪನ್ನಗಳು ಸಾಮಾನ್ಯ ಜನಜೀವನದಲ್ಲಿ ಉಪಯೋಗಿಸಲ್ಪಡುತ್ತಿವೆ.

ಕಾಯಿಯ ವಿವಿಧ ರೂಪಕಗಳೇ ಬಹು ಉಪಯುಕ್ತ. **'ಎಳನೀರೆಂದು'** ಹೆಸರಾಂತ ಎಳೇಕಾಯಿ ಬಹು ಜನಪ್ರಿಯವಾದದ್ದು. ಅದರ ಸಿಹಿನೀರು ಆಹ್ಲಾದಕರವಾದ ಪಾನೀಯ ಮತ್ತು ಲೋಳಿ ತಿರುಳು ರುಚಿಕರ ಆಹಾರ. ಈ ತಿರುಳಿನೊಂದಿಗೆ ಬೆಲ್ಲ ಮತ್ತು ಅವಲಕ್ಕಿ ಕಲಸಿ ತಿಂದಲ್ಲಿ ಅದು ಉತ್ತಮ ಮತ್ತು ಪೌಷ್ಟಿಕರ ಆಹಾರವಾಗುತ್ತದೆ. ಬಲಿತಿರುವ "**ತೆಂಗಿನಕಾಯಿ**"ಯನ್ನು ಅಡಿಗೆಗಾಗಿ ಬಹುವಿಧ ರೂಪದಲ್ಲಿ ಉಪಯೋಗಿಸುತ್ತಾರೆ. ಹಿಂದೂ ಸಂಪ್ರದಾಯದಲ್ಲಿ "**ಶ್ರೀಫಲ**"ವೆಂಬ ಈ ಕಾಯಿಗೆ ಬಹು ಮಹತ್ವದ ಸ್ಥಾನವಿದೆ. ಯಜ್ಞಯಾಗದಲ್ಲಿ, ಹೋಮ–ಪೂಜೆಯಲ್ಲಿ, ಮತ್ತು

ಎಲ್ಲಾ ಸಂತೋಷ ಮತ್ತಿತರ ಸಮಾರಂಭಗಳಲ್ಲಿ ಇದನ್ನು ಶುಭ
ಸೂಚಕದ ಚಿಹ್ನೆಯಾಗಿ ಉಪಯೋಗಿಸಲಾಗುತ್ತದೆ. ಚೆನ್ನಾಗಿ
ಬಲಿತಿರುವ ಕಾಯಿಯ ಒಣತಿರುಳೇ "**ಕೊಬ್ಬರಿ**". ಇದರಲ್ಲಿ
'ಬಟ್ಲುಕೊಬ್ಬರಿ', 'ಉಂಡೆಕೊಬ್ಬರಿ' ಎಂದು ಎರಡು ವಿಧ. ಬಲಿತ
ಕಾಯಿಗಳನ್ನು ಎರಡಾಗಿ ಒಡೆದು ತಿರುಳು ತೆಗೆದು ಅವನ್ನು ಬಿಸಿಲಿ
ನಲ್ಲಿ ಚೆನ್ನಾಗಿ ಒಣಗಿಸಿ ಬಟ್ಲು ಕೊಬ್ಬರಿ ಮಾಡುತ್ತಾರೆ. ಚೆನ್ನಾಗಿ
ಬಲಿತ ಕಾಯಿಗಳನ್ನು ಗಾಳಿಯಾಡುವಂತೆ ಅಟ್ಟಗಳ ಮೇಲೆ
ದಾಸ್ತಾನು ಮಾಡಿಟ್ಟು, ಒಳಗಿನ ತಿರುಳು ನಿಧಾನವಾಗಿ ಒಣಗಿ
ಅಲ್ಲಾಡಲುಪಕ್ರಮಿಸಿದಾಗ ಚಿಪ್ಪನ್ನು ಒಡೆದು ಉಂಡೇಗೊಬ್ಬರಿ
ತೆಗೆಯುತ್ತಾರೆ. ಕೊಬ್ಬರಿಯ ತೂಕ ಮತ್ತು ಉತ್ಪತ್ತಿ ಭೂ ಮತ್ತು
ವಾಯುಗುಣವನ್ನನುಸರಿಸುತ್ತದೆ. ಕೇರಳ ಮತ್ತು ಮೈಸೂರಿನ ತೀರ
ಪ್ರದೇಶಗಳಲ್ಲಿ ಒಂದು ಟನ್ ಕೊಬ್ಬರಿಯಾಗಲು ಸುಮಾರು ೬೨೦೦
ಕಾಯಿಗಳೂ, ಮೈದಾನ ಪ್ರದೇಶದಲ್ಲಿ ೮೦೦೦ ಕಾಯಿಗಳೂ,
ಗೋದಾವರೀ ಪ್ರದೇಶದಲ್ಲಿ ೭೦೦೦ ಕಾಯಿಗಳೂ ಬೇಕಾಗುವುವೆಂದು
ಅಂದಾಜುಮಾಡಲಾಗಿದೆ. ಕೊಬ್ಬರಿಯಿಂದ "ಒಣಕೊಬ್ಬರಿ ತುರಿ"
ಯನ್ನು ತಯಾರಿಸಿ ಅನೇಕ ತಿಂಡಿತಿನಸುಗಳಲ್ಲಿ ಉಪಯೋಗಿಸಲಾಗು
ತ್ತಿದೆ. ಮುಖ್ಯವಾದ "**ಕೊಬ್ಬರಿ ಎಣ್ಣೆ**" ಇದರಿಂದಲೇ ಉತ್ಪನ್ನ
ವಾಗುತ್ತದೆ. ಎಣ್ಣೆಯನ್ನು ಗಾಣದಿಂದಾಗಲೀ ಎಕ್ಸ್‌ಪೆಲ್ಲರ್‌ಗಳ
ಸಹಾಯದಿಂದಾಗಲೀ ತೆಗೆಯಲಾಗುತ್ತಿದೆ. ಕೊಬ್ಬರಿಯ ತೂಕದ
ಶೇ. ೫೮-೬೫ ಭಾಗ ಎಣ್ಣೆ ಉತ್ಪನ್ನವಾಗುತ್ತದೆ. ಇದನ್ನು ಆಹಾರ
ಕ್ಕಾಗಿಯಲ್ಲದೆ, ಸೋಪು, ಮುಖಕ್ಕೆ ಹಚ್ಚುವ ಅಲಂಕಾರ ವಸ್ತು
ಗಳು, ಗ್ಲಿಸರಿನ್ ಮುಂತಾಗಿ ಬಹು ವಿಧದಲ್ಲಿ ಉಪಯೋಗಿಸಲಾಗು
ತ್ತದೆ. ಎಣ್ಣೆ ತೆಗೆದಾದ "**ಹಿಂಡಿ**" ಉತ್ತಮ ದನದ ಮೇವು ಮತ್ತು
ಗೊಬ್ಬರ.

ತೆಂಗಿನ ಉತ್ಪತ್ತಿಯನ್ನು ದೇಶದಲ್ಲೇ ಹೆಚ್ಚಾಗಿ ಬಳಸಲಾಗುತ್ತಿದ್ದು, ಶೇ. ೮೪ ಭಾಗ ಉತ್ಪತ್ತಿ ಉಪಯೋಗಿಸಲ್ಪಡುತ್ತಿದೆ. ತುಪ್ಪವಾಗಲೀ, ಇತರ ಯಾವ ಎಣ್ಣೆಯೇ ಆಗಲೀ ತೆಂಗಿನ ಎಣ್ಣೆಯಷ್ಟು ಸುಲಭವಾಗಿ ಜೀರ್ಣವಾಗಲಾರದು. ಹಿಂಡಿಯಲ್ಲಿ ಶೇ. ೨೧.೬ ಭಾಗ ಸಸಾರಜನಕವಿದೆ. ತೆಂಗಿನ ನೀರಿನಲ್ಲಿ ೩–೬ ಭಾಗ ಶರ್ಕರಪಿಷ್ಟಾದಿಗಳಿವೆ. ಆದ್ದರಿಂದ ತೆಂಗಿನಕಾಯಿ ಮತ್ತು ಅದರ ವಿವಿಧೋತ್ಪತ್ತಿ ಉತ್ತಮ ಆಹಾರ.

ಕಾಯಿಯ ಮೇಲಿನ "**ಜುಂಗಿ**"ನಿಂದ ಅನೇಕ ಪ್ರಯೋಜನಗಳಿವೆ. ಇದನ್ನು ಕೊಳೆಹಾಕಿ ಬಡಿದು, ಬರುವ ನಾರಿನಿಂದ ಉತ್ತಮ ದರ್ಜೆಯ ವಿವಿಧ ರೀತಿಯ ಹಗ್ಗವನ್ನು ತಯಾರಿಸಬಹುದು. ಸಾಮಾನ್ಯವಾಗಿ ೧೦೦೦ ಕಾಯಿಗಳ ಜುಂಗಿನಿಂದ ೮೨ ಕಿ.ಗ್ರಾಂ. ನಾರು ಸಿಗುತ್ತದೆ. ವಿವಿಧ ಹಗ್ಗಗಳ ತಯಾರಿಕೆಗೆ, ಚಾಪೆ, ಜಮಖಾನೆ ಮುಂತಾದ ಅನೇಕ ಉಪಯುಕ್ತ ವಸ್ತುಗಳನ್ನು ಇದರಿಂದ ತಯಾರಿಸಬಹುದಾಗಿದೆ. ಹುರಿಮಾಡುವಾಗ ಮಿಗಬಹುದಾದ ದಪ್ಪ ಎಳೆಗಳು, ನಾರಿನ ಪುಡಿ ಮುಂತಾದುವನ್ನು ಹಾಸಿಗೆ, ದಿಂಬುಗಳಿಗಾಗಿಯೂ, ದಪ್ಪ ರಟ್ಟುಗಳನ್ನು ತಯಾರಿಸಲೂ ಉಪಯೋಗಿಸಬಹುದು. ಹುರಿ ತಯಾರಿಸುವ ವಾಡಿಕೆಯಿಲ್ಲದ ಕಡೆ, ಇದನ್ನು ಸೌದೆಗಾಗಿ ಉಪಯೋಗಿಸುತ್ತಾರೆ. ತೋಟದಲ್ಲಿ ಅವನ್ನು ಹೂತಲ್ಲಿ ಭೂಮಿ ಫಲವತ್ತಾಗಿ ಹೆಚ್ಚಿನ ನೀರು ಹೀರಲು ಅನುಕೂಲವಾಗುತ್ತದೆ.

"**ತೆಂಗಿನ ಚಿಪ್ಪ**"ನ್ನು ಕೊರೆದು ಮೇಲ್ಗಡೆ, ಚಿತ್ರಕೆಲಸಮಾಡಿ ಅಲಂಕಾರ ವಸ್ತುಗಳನ್ನು ತಯಾರಿಸುತ್ತಾರೆ. ಸುಣ್ಣ ಮತ್ತು ಇಟ್ಟಿಗೆಯ ಗೂಡುಗಳಲ್ಲಿ ಸೌದೆಯಾಗಿ ಇದನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಅದರ ಇದ್ದಿಲು ಹೆಚ್ಚು ಶಾಖಕೊಡುವುದರಿಂದ

ಕಮ್ಮಾರರೂ, ಅಕ್ಕಸಾಲಿಗರೂ, ಅಗಸರೂ ಅದನ್ನು ಉಪಯೋಗಿಸುತ್ತಾರೆ. ಚಿಪ್ಪಿನಿಂದ ಶೇ. ೩೦ ಭಾಗ ಇದ್ದಿಲು ದೊರಕುತ್ತದೆ. ೭೦೦೦ ಕಾಯಿಗಳ ಚಿಪ್ಪಿನಿಂದ ಒಂದು ಟನ್ ಇದ್ದಿಲು ಸಿಗುತ್ತದೆ. ಇದ್ದಲು ಪುಡಿ ಒಳ್ಳೆಯ ದಂತಚೂರ್ಣ. ಚಿಪ್ಪಿನಲ್ಲಿ ೦.೨೩ ರಿಂದ ೧.೪ ಭಾಗ ಪೊಟ್ಯಾಷ್ ಇರುತ್ತದಾದ್ದರಿಂದ ಅದರ ಬೂದಿ ಉತ್ತಮ ಗೊಬ್ಬರ.

"**ತೆಂಗಿನ ರಸ**"ದಿಂದ "ನೀರಾ" ಎಂಬ ಉತ್ತಮ ಆರೋಗ್ಯಕರ ಪಾನೀಯ ಉತ್ಪನ್ನವಾಗುತ್ತದೆ. ಅದರಲ್ಲಿ ಶೇ. ೧೬ ಭಾಗ ಸಕ್ಕರೆಯಿದ್ದು ಅದನ್ನು ಕಾಯಿಸಿ 'ಬೆಲ್ಲ' ತೆಗೆಯಲೂ 'ಸಕ್ಕರೆ' 'ಕೆಂಪುಸಕ್ಕರೆ' ತಯಾರಿಸಲೂ ಅನುಕೂಲವಾಗುತ್ತದೆ. ನೀರಾವನ್ನು ಬಿಸಿಲಿನಲ್ಲಿ ಇಟ್ಟಲ್ಲಿ ಹುಳಿಬಂದು 'ಹೆಂಡ'ವಾಗುತ್ತದೆ. ಅದರಲ್ಲಿ ಶೇ. ೬–೭.೫ ಭಾಗ ಮಾದಕ ಪದಾರ್ಥ ಉಂಟಾಗುತ್ತದೆ. ಹೆಂಡವನ್ನು ಬಟ್ಟಿ ಇಳಿಸಿದಲ್ಲಿ ಶೇ. ೧೮ರಿಂದ ೩೦ ಭಾಗ ಮಾದಕವಿರುವ 'ಸಾರಾಯಿ'ಯನ್ನು ತಯಾರಿಸಬಹುದು. ನೀರಾದಿಂದ 'ವಿನಿಗರ್' ಎಂಬ ಹುಳಿಯನ್ನು ತಯಾರಿಸಿ ಅದನ್ನು ಹುಣಿಸೇಹಣ್ಣಿಗೆ ಬದಲಾಗಿ ಉಪಯೋಗಿಸಬಹುದು.

"**ತೆಂಗಿನ ಎಲೆ**"ಗಳನ್ನು ಹೆಣೆದು ಮಾಡುಮುಚ್ಚಲೂ, ತಟ್ಟಿಕಟ್ಟಲೂ ಉಪಯೋಗಿಸಬಹುದು. ಕೇರಳದಲ್ಲಿ ಅದರಿಂದ ಕೊಡೆ ಹೆಣೆದು ಉಪಯೋಗಿಸುತ್ತಾರೆ. ಪಾತಿಗಳಿಗೂ, ಸಸಿಗಳಿಗೂ ನೆರಳು ಕೊಡಲೂ, ಮರಚುಮಾಡಲೂ ಉಪಯೋಗಿಸಲಾಗುತ್ತದೆ. ಅದರ ಮಧ್ಯದ ಕಡ್ಡಿಗಳನ್ನು ಪೊರಕೆಗಳಿಗೆ ಹೆಚ್ಚಾಗಿ ಬಳಸಲಾಗುತ್ತದೆ.

ಬಿದ್ದ ಹೊಂಬಾಳೆಗಳೂ, ಎಲೆಯ ಬುಡಗಳೂ, ಕಾಯಿ ಕಾಂಡಗಳೂ ಹೆಚ್ಚಾಗಿ ಸೌದೆಯಾಗಿ ಉಪಯೋಗಿಸಲ್ಪಡುತ್ತವೆ.

"**ಮರದ ಕಾಂಡ**"ದಿಂದ ಒಳ್ಳೆಯ ತೊಲೆ ದೊರಕುತ್ತದೆ. ಅದು ತೊಲೆ, ಬಾಗಿಲು, ಕಿಟಕಿಗಳಿಗೆ ಉಪಯುಕ್ತವಾಗಿದೆ. ಅದನ್ನು ಕೆಲಕಾಲ ಉಪ್ಪುನೀರಿನಲ್ಲಿ ನೆನೆಸಿದ್ದು ಬಳಸಿದಲ್ಲಿ ಬಹುಕಾಲ ಬಾಳುತ್ತದೆ.

ಇಷ್ಟು ವಿವಿಧೋಪಯುಕ್ತ ಮರವಾದ ತೆಂಗು ನಿಜವಾಗಿಯೂ '**ಕಲಿಯುಗದ ಕಲ್ಪವೃಕ್ಷವೇ**' ಸರಿ.

